# ಒಡನಾಡಿ

( ಕವನಸಂಗ್ರಹ )

ಆನಂದಕಂದ

೧ ರೂಪಾಯಿ

೧೯೪೫ ಏಪ್ರಿಲ್

ಇಲ್ಲಿಯ ಕೃತಿಗಳಲ್ಲಿ ಹೆಚ್ಚಿನವು ಭಾವಗೀತಗಳು—ಬಗೆವಾಡುಗಳು. ಇವುಗಳನ್ನು ಬರೀ ಓದಿಕೊಳುವುದಕ್ಕಿಂತ ಹಾಡಿಕೊಂಡರೆ ಹೆಚ್ಚು ಚೆನ್ನಾಗಿರುವುದು. ಕಣ್ಣೋದಿಗಿಂತ ಕೊರಳೋದು ಹೆಚ್ಚು ಪರಿಣಾಮಕಾರಿಯೆನಿಸುವುದು. ಹಾಡಿಕೊಳಬೇಕೆಂದರೆ ಗಾಯನದಲ್ಲಿ ಭಾವವನ್ನು ಮುಳುಗಿಸುವುದಲ್ಲ; ಗಮಕದಿಂದ ಭಾವಗಳನ್ನು ಪರಿಪುಷ್ಟಿಗೊಳಿಸುವುದು. ಉತ್ತರಪ್ರಾಂತಗಳಲ್ಲಿ ಈಗ ಭಾವಗೀತಗಳನ್ನು ಹೇಳುವ ಸಂಗೀತಗಾರರ ಪರಂಪರೆ ಹೊರಟಿದೆ. ಕನ್ನಡ ನಾಡಿನಲ್ಲಿ ಅದಿನ್ನೂ ಅಷ್ಟೊಂದು ಮನ್ನಣೆ ಪಡೆದು ಮುಂದೆ ಬಂದಿಲ್ಲ. ಆದರೆ ಅದರ ಆವಶ್ಯಕತೆಯನ್ನು ಇಂದು ಬಹುಜನರು ಒಪ್ಪುತ್ತಿದ್ದಾರೆ. ನಮ್ಮಲ್ಲಿಯ ಸಂಗೀತಗಾರರೂ ಭಾವ-ಗೀತಗಳ ಗಮಕ ಪ್ರಾರಂಭಿಸಿದರೆ, ಮಿಕ್ಕ ಯಾವ ಪ್ರಾಂತದವರಿಗಿಂತಲೂ ಹಿಂದೆ ಬೀಳಲಾರರೆಂಬ ನಂಬುಗೆ ನನಗಿದೆ. ಕನ್ನಡ ಭಾವಗೀತಕಾರರಿಗೆ ಸಂಗೀತಗಾರರ ಸಹಕಾರ ದೊರೆತರೆ, ಎಲ್ಲೆಲ್ಲಿಯೂ 'ಎನಿತು ಇನಿದು ಈ ಕನ್ನಡ ನುಡಿಯು ?' ಎಂಬ ಮಾತು ಮೊಳಗೀತು. ಇದರಲ್ಲಿಯ ಗೀತಗಳು ಅಂತಹ ಅಭಿಮಾನಿಗಳಾದ ಸಂಗೀತಗಾರರ ಸಹಕಾರವನ್ನು ಅಪೇಕ್ಷಿಸುತ್ತವೆ.

ಹತ್ತುವರ್ಷ ಕತ್ತಲೆಯಲ್ಲಿ ಬಿದ್ದುಕೊಂಡಿದ್ದ ಈ ಸಂಗ್ರಹವು, ಇದ್ದುದರಲ್ಲಿಯೆ ಇಷ್ಟೊಂದು ಮುದ್ದಾದ ಉಡಿಗೆ-ತೊಡಿಗೆಯಿಟ್ಟು ಅಚ್ಚುಕಟ್ಟಾಗಿ ಹೊರಡಲು, ಸಾಧನ ಮುದ್ರಣಾಲಯದ ಸಂಚಾಲಕ ಶ್ರೀ. ಕುಲಕರ್ಣಿ ಶೇಷಗಿರಿರಾಯರು ಕೊಟ್ಟ ಸಹಕಾರ ತುಂಬ ಕಾರಣವಾಯಿತು. ಈ ಸಹಕಾರಕ್ಕಾಗಿ ಅವರಿಗೆ ಕೃತಜ್ಞತೆಯ ವಂದನೆಗಳು.

'ಜಯಂತಿ ಕಾರ್ಯಾಲಯ'
ಧಾರವಾಡ
ತಾ. ೧೬-೪-೪೫

**ಆನಂದಕಂದ.**

# ಪರಿವಿಡಿ

## ಇದೇ ಲೇಖಕರ ಬೇರೆ ಗ್ರಂಥಗಳು

### ಅಚ್ಚಾದುವು

ಮುದ್ದನ ಮಾತು (ಕವನಸಂಗ್ರಹ)
ಅರುಣೋದಯ ( ,, )
ವಿರಹಿಣಿ ( ,, )
ಬಡತನದ ಬಾಳು (ಕಥಾಸಂಗ್ರಹ)
ಸಂಸಾರ ಚಿತ್ರ ( ,, )
ನಮ್ಮ ಒಡುಕು ( ,, )
ಸುದರ್ಶನ (ಸಾಮಾಜಿಕ ಕಾದಂಬರಿ)
ರಾಜಯೋಗಿ (ಐತಿಹಾಸಿಕ ಕಾದಂಬರಿ)
ಅಶಾಂತಿಪರ್ವ ( ,, )
ಕರ್ನಾಟಕ ಜನಜೀವನ (ಸಂಶೋಧನಾತ್ಮಕ)
ಭಾವಗೀತ (ಗೀತಸಂಕಲನ)
ಹಳ್ಳಿಗರ ಹಾಡು (ಜನಪದ ಸಾಹಿತ್ಯ ವಿಮರ್ಶೆ)
ಬಸವಣ್ಣನವರು ವಚನಗಳು (ಚರಿತ್ರ)

### ಅಚ್ಚಿನಲ್ಲಿರುವುವು

ಸಾಮಾಜಿಕನ ಸಂವಚನಗಳು
ಕಾರಹುಣ್ಣಿವೆ (ಕವನ ಸಂಗ್ರಹ)
ಹಾಳು ಹಳ್ಳಿ (ಸಾಮಾಜಿಕ ಕಾದಂಬರಿ)

# ಒಡನಾಡಿ

ಒಡನಾಡಿ ಬೇಕೆಂದು
ಮಿಡುಕಿಯೇ ಮಿಡುಕಿದೆನು,
ಕಡೆಗೆ ನೀ ಬಂದೆನ್ನ ಮಿಡುಕ ಕಳೆದೆ;
ಕೆಡಿಸಿ ಜೀವನಕೆ ಬಂ-
ದಡಸಿರುವ ಕಾರಿರುಳ,
ಬೆಡಗುಗಾತಿಯೆ ಬೆಳಕ ಮೊಗ ತೋರಿದೆ ! ೧

ಕಿರಿಯ ನಾನಿರುವಂದು
ನೆರೆದು ನಲಿನಲಿದಾಡಿ
ಬೆರೆದು ಒಂದಾಗಿದ್ದ ಗೆಳೆಯರೆಲ್ಲಾ—
ಹರಯ ಬರೆ ತಮ್ಮೊಲವ-
ನಿರಿಸಿ ಇನ್ನೆಲ್ಲಿಯೋ
ಬೆರತದೇತಕೊ ನನ್ನ ತೊರೆದರಲ್ಲಾ ! ೨

ತೊರೆಯಲೆಲ್ಲರು ನನ್ನ
ಮರುಳನಂತಾಗಿ ನಾ
ಅರಸತೊಡಗಿದೆ ಒಲವನಿರಿಸಲೆಡೆಯ;
ಇರದಿರಲು ಕೆಳೆಯೊಂದು
ಬರಿಯುದಿದು ಬದುಕೆಂದು
ಅರಿತರಿತು ಬಯಸಿದೆನು ಒಡನಾಡಿಯ ! ೩

ಚೆಂಬೊನ್ನ ತಂಬಿಗೆಗೆ
ಹಂಬಲಿಸ ಹುಂಬನವ
ಕುಂಬರರ ಮನೆಗಳಲಿ ಹುಡುಕಿದಂತೆ—
ತುಂಬಿರಲು ಕೆಳೆಯಾಸೆ
ನಂಬಿ ಕಂಡವರನೇ
ಬೆಂಬಳಸಿ ಅಲೆದು ಬಾಯ್ಬಿಡುತೆ ನಿಂತೆ ! ೪

ಬೇವಿನಾ ಕಹಿಗಿಡವೆ
ತೀವಿರುವ ಕಾಡಿನಲಿ
ಮಾವನರಸುತ ಬರಿದೆ ತಿರುಗಾಡಿದೆ;
ಒರತೆ ಹೊರಡುವುದೆಂದು
ಮರಳುನೆಲವನ್ನಗೆದೆ, ೫
ಕೊರಡು ಕೊನರುವುದೆಂದು ನೀರೂಡಿದೆ !

ಬರಿಯೆ ಬಣ್ಣದಿ ಕಣ್ಣ
ಸೆರೆ ಹಿಡಿವ-ಹುರುಳಿರದ-
ಬರಡು ಹೂಗಳಿಗೊಲಿವ ತುಂಬಿಯಾದೆ;
ಉರಿಯ ಮರೆಯುತ ದೀಪ-
ಕೆರಗಿ ಮೆಯ್ಯೆಲ್ಲವನು
ಉರಿದುಕೊಳ್ಳುವ ಮರುಳುಚಿಟ್ಟೆಯಾದೆ ! ೬

ನೀರ ಹನಿಗಳ ಕಂಡು
ತೋರ ಮುತ್ತುಗಳೆಂದು
ಆರಿಸಲು ನನ್ನ ಮನ ತಾರಾಡಿತು;
ಹುಳುವೆಂದು ತಿಳಿಯದೆಯೆ
ಬೆಳಕಿಗೊಲಿಯುತೆ ಮಿಣುಕು-
ಹುಳುವಿನೊಡನೆಯೆ ಜೀವ ಹಾರಾಡಿತು ! ೭

ಮೊಳೆತ ಕೆಳೆ ಕುಡಿವರೆದು
ಫಲಫಲಿಸಲೆಂದಿರಲು
ನೆಲೆಯೆ ಎಲ್ಲೆಲ್ಲಿಯೂ ದೊರೆಯದಾಯ್ತು;
ಒಲವಿನಾ ತಿಳಿನೀರ
ತಳಿವ ಜನವಿಲ್ಲದಿರೆ
ಮೊಳಕೆ ದಿನದಿನಕೆ ಕಳೆಗೆಡತೊಡಗಿತು! ೮

ಎಳೆಯನಾಗಿರುವಂದು
ಬೆಳಕದಾವುದೊ ಬಂದು
ಬೆಳಗಿ ತೊಳಗುತಲಿದ್ದಿತೆನ್ನ ಬಾಳು;
ಬಳಿದು ಒಲಿಯುತಲಿರಲು
ಬಳಸಿ ಕಾವಳ ಬದುಕ
ಕಳವಳಕೆ ಗುರಿಮಾಡಿತಹಹ, ಗೋಳು! ೯

ಸಾವು ಬೇಕೋ ನನಗೆ
ಜೀವಿಸಿರುವುದು ಬೇಕೊ—
ಯಾವುದೊಂದೂ ಕಾಣದಾಯ್ತು ಮನಕೆ;
ಕಣ್ಣಿರಲು ಕುರುಡಾದೆ,
ಕಿವಿಯಿದ್ದೂ ಕಿವುಡಾದೆ;
ಒಣ್ಣನೆಯ ಮಾತೆನ್ನಬೇಡವಿದಕೆ! ೧೦

ಹಗಲದಾವುದೊ ತಿಳಿಯೆ,
ಇರುಳದಾವುದೊ ಅರಿಯೆ;
ಬಗೆಯ ಮಬ್ಬಿಡು ನೇಸರನು ಮುಸುಕಿರೆ—
ನಿದ್ದೆಯಲಿಯೂ ನೆನಸು
ಎದ್ದಾಗಲೂ ಕನಸು
ಮೊದ್ದುತನ ಬುದ್ಧಿಯನು ಮರೆಮಾಡಿರೆ! ೧೧

‘ ಆಡುವೆನದಾರೊಡನೆ ?
ಹಾಡುವೆನದಾರೊಡನೆ ?
ಕೂಡುವೆನದಾರೊಡನೆ ? ’ ಎಂದು ಬೆಂದೆ;
ಆಡುವುದು ಸಾಕೆಂದೆ,
ಹಾಡುವುದು ಸಾಕೆಂದೆ,
ಊಡುವುದು ಸಾಕೆಂದು ಉಸಿರುಗಳೆದೆ ! ೧೨

ಒಡನಾಡಿ ಬೇಕೆಂದು
ಮಿಡುಕಿಯೇ ಮಿಡುಕುತಿರೆ,
ಕಡೆಗೆ ನೀ ಬಂದೆನ್ನ ಮಿಡುಕ ಕಳೆದೆ;
ಕೊಡಹಿ ಬಾಳುವೆಗೆ ಬಂ-
ದಡಸಿರುವ ಕಾರಿರುಳ,
ಬೆಡಗುಗಾತಿಯೆ, ಬೆಳಕುಮೊಗ ತೋರಿದೆ ! ೧೩

ಹಿರಿಯರೆಲ್ಲರು ಅಂದು
ಬೆರಸಿ ಇಬ್ಬರನೊಂದು
‘ ಮೆರೆಯಿಸಿರಿ ಸಂಸಾರಸಿರಿಯ ’ ನೆಂದು—
ಹರಕೆಯಿತ್ತುದ ಮರೆತು
ಇನ್ನಾವುದಕೊ ಬೆರತು,
ಮರುಳಾದೆ ಮಂಕಾದೆ ಬರಿದೆ ನೊಂದು ! ೧೪

ಕಾರಮೋಡವು ಮುಸುಕಿ
ಮೀರಿಸಿರೆ ಕತ್ತಲೆಯ,
ದಾರಿಯನು ನಡೆವ ದಾರಿಗನ ಕಣ್ಗೆ—
ಆರದಾ ಬೆಳಕೊಂದು
ತೋರಿ ತಣಿಸಿದ ತೆರದಿ
ನೀರೆ ನೀ ಬಂದು ಬೆಳಕಿತ್ತೆ ನನಗೆ ! ೧೫

ಮಾಗಿಯುಲಿ ಕಳೆಯಾರಿ
ಹೋಗಿರುವ ಬನದ ಸಿರಿ
ಸಾಗಿ ಬರೆ ಸುಗ್ಗಿ ಕಳೆಯೇರುವಂತೆ—
ರಾಗಿಣಿಯೆ, ನೀ ಸುಗ್ಗಿ-
ಯಾಗಿ ಬರಲಂದೊಣಗಿ-
ಹೋಗಿರುವ ಕೆಳೆಮೊಳಕೆ ಕೊನರಿಟ್ಟಿತೆ! ೧೬

ಯೋಗವೊದಗದ ಮೊದಲೆ
ಯೋಗ್ಯತೆಯು ತಿಳಿವುದೇ ?
ಏಗಲೂ ಗೊತ್ತುಹುದೆ ಕೋಗಿಲ ಬೆಲೆ ?
ಆಗ ನಿನ್ನಯ ಹವಣ
ತೂಗಿ ತಿಳಿಯದೆಯೆ ಅನು-
ರಾಗವನು ಕಂಡತ್ತ ಕಳುಹಿದೆನೆಲೆ! ೧೭

ಮನವು ಬಂದೆಡೆ ಮೇವ
ದನವು ದೊಣ್ಣೆಯ ನೋವ
ತಿನದೆ ಮರಳುವುದುಂಟೆ? ಅಂತೆ ನನ್ನ
ಮನವು ಕಂಡೆಡೆಗಳಲಿ
ಕುಣಿದು ಗುದ್ದರ್ನು ತಿಂದು
ದಣಿದು ಬಿದ್ದುದನೇನನೆಂಬೆ ರನ್ನ! ೧೮

ಬಡವನೊರ್ವನು ಹಣವ
ಪಡೆವೆನೆನ್ನುತ ಸಿಕ್ಕ
ಕಡೆಯೊಳಲೆದಾಡಿ ತಾ ಮರಳಿ ಬಂದು;
ನಡುಮನೆಯೊಳೇ ನಿಧಿಯು
ಕೊಡವ ನೋಡಿದ ತೆರದಿ
ಹುಡುಗಿ, ನಿನ್ನನು ಕಂಡು ನಲಿವೆನಿಂದು! ೧೯

ಕುತ್ತ ಕಳಕೊಳಲೆಂದು
ಸುತ್ತಿದೆನು ನಾಡೆಲ್ಲ,
ಎತ್ತಲೆತ್ತಲು ಮದ್ದು ದೊರೆಯಲಿಲ್ಲ;
ಹಿತ್ತಲಿನ ಬಳ್ಳಿಯಿದು
ಕುತ್ತ ಕಳೆಯುವುದೆಂದು
ಸತ್ಯ-ಸತ್ಯವು ನನಗೆ ತಿಳಿಯಲಿಲ್ಲ ! ೨೦

ಮುದ್ದುಗೆಳತಿಯೆ, ಸಸ್ನ
ಬುದ್ಧಿಯನು ಹೊದ್ದಿರುವ
ಮೊದ್ದುತನ ನಿನ್ನಿಂದ ಹಾಳಾಯಿತೆ;
ಬಿದ್ದಲಿಯೆ ಒದ್ದುಕೊಂ-
ಡಿದ್ದರ್-ಸೋತಿದ್ದರ್-ಬಗೆ
ಎದ್ದು ಕುಣಿದಾಡಿ ನಿನಗಾಳಾಯಿತೆ ! ೨೧

ನಿನ್ನೊಂದುಗೂಡೆ ಹೊಸ-
ಬಣ್ಣ ಬಂದಿತು ತಿರೆಗೆ
ಚೆನ್ನೆ, ಎಲ್ಲೆಲ್ಲಿಯೂ ನಲಿವೆ ನಲಿವು !
ನಿನ್ನಿಂದಲೇ ಹಗಲು
ನಿನ್ನಿಂದಲೇ ಇರುಳು
ಚೆನ್ನತೆಯ ಪಡೆದೆನಗೆ ಸೊಗಯಿಸುವವು ! ೨೨

ಬಂಜರಾಗಿಯೆ ಕಂಡ
ಸಂಜೆ-ಮುಗಿಲಿನ ಚೆಂದ
ರಂಜಿಸಿತು ನಿನ್ನ ಚೆಲುವನ್ನು ಹೀರಿ !
ಗಿಂಜೆಂದು ತೋರಿದ್ದರ್
ಪಂಜರದ ಗಿಣಿಯ ನುಡಿ
ರಂಜಿಸಿತು ನಿನ್ನ ಸುಡಿಮೆಲುಪ ತೋರಿ! ೨೩

ಹಣ್ಣಿನಲಿ ಹೊಸ ತಿರುಳ
ಹೂವಿನಲಿ ಹೊಸ ಹುರುಳ
ಉಣ್ಣುವನ್ನಕದೇಂದು ಹೊಸತು ಸವಿಯು—
ನಿನ್ನ ಒಡನಾಟದಲಿ
ಪಡೆದೆ ನನ್ನರಸುಗಿಳಿ,
ಬಣ್ಣಿಸಲು ಬರದೆನಗೆ ನಿನ್ನ ಪರಿಯು ! ೨೪

‘ ಇಳೆಯು ಚೆಲುವಿನ ನೆಲೆ—
ಚೆಲುವು ನನ್ನಿಯ ಸೆಲೆ ’
ಎನುವ ನುಡಿ ನೀ ಬರಲು ನಿಜವಾಯಿತು!
ಗೆಳತಿ ನಿನ್ನನ್ನುಳಿಯೆ
ಇಳೆಯ ಚೆಲುವೆಲ್ಲವಿದು
ಅಳಿದು ಬಯಲಹುದೆಂಬ ಅರಿವೊದವಿತು ! ೨೫

ನಿನ್ನೊಡನೆ ಆಡುವೆನೆ,
ನಿನ್ನೊಡನೆ ಹಾಡುವೆನೆ,
ನಿನ್ನೊಡನೆ ಕೂಡಿ ಕುಣಿದಾಡುತಿಹೆನೆ;
ನಿನ್ನನುಳಿದಾ ಕ್ಷಣವು
ನನ್ನ ಬಾಳಿನ ಕೊನೆಯು,
ನನ್ನುಸಿರಿನುಸಿರು ಅಹುದಹುದೆ ನೀನೆ ! ೨೬

ಒಡನಾಡಿ ಬೇಕೆಂದು
ಮಿಡುಕಿಯೇ ಮಿಡುಕುತಿರೆ
ಕಡೆಗೆ ನೀ ಬಂದೆನ್ನ ಮಿಡುಕ ಕಳೆದೆ;
ಜಡಿದು ಜೀವನಕೆ ಬಂ-
ದಡಸಿರುವ ಕಾರಿರುಳ
ಬೆಡಗುಗಾತಿಯೆ ಬೆಳಕ ಮೊಗತೋರಿದೆ ! ೨೭

---

*

# ಚೆಂದದೊಡತಿ

ನನ್ನದೇನೆಲ್ಲವನು
ನಿನ್ನದಾಗಿಸಿಕೊಂಡೆ,
ಇನ್ನು ನೀನೆಂದು ನನ್ನವಳಾಗುವೆ ?
ಬನ್ನಕೆಡೆಮಾಡಿ ನೀ
ಬಣ್ಣಗೆಡಿಸಿದೆ ನನ್ನ,
ರನ್ನೆ ! ಕರಗುವ ಕರುಳು ನಿನಗಿಲ್ಲವೆ ? ೧

ಕೊರಳ ಹೊರಳಿಸುತ ಸುಳಿ-
ಗುರುಳ ಬವರಿಯ ತೂರಿ
ಅರಳುಗಣ್ಣುಗಳ ಸೆಳೆಮಿಂಚ ತೋರಿ,
ಕಿರುನಗೆಯ ತಾರಗೆಯ
ಮಿರುಗಿಸುತ ಮುಳುಗಿಸುತ
ಎರಡು ಕಂಗಳನು ಸೆರೆಗೈದೆ ನಾರಿ! ೨

ಒಂದೆ—ಒಂದೇ ಸಲವೆ
ಅಂದು ನೋಡಿದೆ, ನಿನ್ನ
ಅಂದ-ಚೆಂದಕೆ ಮನಸು ಮಾರುಹೋಯ್ತು;
‘ ಚೆಂದದೊಡತಿಯೆ ಶರಣು ! ’
ಎಂದುಬಿಟ್ಟಿತು, ಬಯಕೆ
ಅಂದೆ ನಿನ್ನೂಳಿಗದ ಆಳಾಯಿತೆ ! ೩

ಒಲವು ನನ್ನದು ನಿನ್ನ
ಬಳಸಿ ಸುಳಿಯುತಲಿಹುದೆ,
ಸಲಿವು ನೀನಿರ್ದ್ದಲಿಯೆ ನಲಿಯುತಿಹುದೆ!
ಒಲವು ನಿನ್ನಲ್ಲಿಯೇ
ನೆಲೆಗೊಂಡು ನಿಂತಿಹುದೆ;
ಕೆಳೆಯು ನೀನಲ್ಲದನ್ಯರನೆಳಸದೆ! ೪

ಇರಲು ಮನೆಮಾಡಿಕೊಂ-
ಡಿರುವೆ ನೀ ನನ್ನೆದೆಯ
ಕರುಳನೇ ಕುಣಿತದೆಡೆ ಮಾಡಿಯಿರುವೆ;
ಮುರ-ಮುರಳಿ ಸುಳಿಡುತಿಹ
ಮನದ ಯೋಚನೆಗಳನೆ
ತಿರುಗಾಟದೆಡೆ ಮಾಡಿಕೊಂಡು ಬರುವೆ! ೫

ತಾಯ ಕರುಳಿನ ತನಿಯೆ
ತಂದೆಯೊಲುಮೆಯ ಖನಿಯೆ
ನೇಯಿಗರ ಒಡನಾಟ-ಜೇನ ಹನಿಯೆ!
ರಾಯರಾಣಿಯ ವಿಭವ—
ಬೆಳಗು-ಬೈಗಿನ ಚೆಲುವ-
ನೋವಿರುವೆ ನೀನೆಂತು ಕಲೆಯ ಕಣಿಯೆ? ೬

ನನ್ನದೆಂಬುದನೆಲ್ಲ
ನಿನ್ನದಾಗಿಸಿಕೊಂಡೆ,
ಇನ್ನು ನೀನೆಂದು ನನ್ನವಳಾಗುವೆ?
ಬನ್ನಕೆಡೆಯಾಗಿ ನಾ
ಒಣ್ಣಗೆಟ್ಟಿಹೆ ಚೆನ್ನೆ,
ಇನ್ನೆಂದು ನೀನು ನನ್ನವಳಾಗುವೆ? ೭

---

# ನನ್ನಾಕೆಗೆ :—

ನಲ್ಲೆ, ನಿನ್ನ ರೂಪ ನೋಡಿದೆಲ್ಲ ಜನರು ಏನೊ ಏನೊ
ಅಲ್ಲಗಳೆದು ನುಡಿವುದನ್ನು ಕೇಳುತಿರುವೆನು !
'ಕಿರಿದು ಮೂಗು' ಎನುವನೊಬ್ಬ,
'ಹರವು ಬಾಯಿ' ಎನುವನೊಬ್ಬ
'ಕುರುಳ ಕರಿದು ಕಡಿಮೆ' ಎಂದು
ಜರಿವನೊಬ್ಬನು;
'ಕೊರಳು ನಿಡಿದು' ಎಂದು ಮೂಗ
ಮುರಿವನೊಬ್ಬನು ! ೧

'ಕಣ್ಣ ನೋಟ ನಸುವೆ ಕೊಂಕು' ಎನ್ನುವನಿನ್ನೊಬ್ಬನು,
'ಕೆನ್ನೆಗಳಿಗೆ ಕೆಂಪು ಕೊರತೆ' ಎನ್ನುವ ಮತ್ತೊಬ್ಬನು !
'ಮೈಯ ಬಣ್ಣ ಕೊಂಚ ಕಪ್ಪು'
'ಮೈಗೆ ಕಡಿಮೆಯಹುದು ಒಪ್ಪು'
ಎಂದು ಮಂದಿ ಒಂದಕೊಂದು
ಕುಂದನರಿಸಿ ನುಡಿಯಲು—
ತಂದುಕೊಳುವೆನಾಗ ನಿನ್ನ
ಅಂದವನ್ನು ಮನದೊಳು ! ೨

ತಂದುಕೊಳುವೆ ನನ್ನ ಮನದೊಳಂದು ನಿನ್ನ ನೋಡುವೆ;
'ಮಂದಿಯೆನುವ ಮಾತು ದಿಟವು' ಎಂದೆನಿಸಲು ನೋಯುವೆ !
ಆದರೆ ಏನಚ್ಚರಿಯಿದು ?
ಎದುರು ನೀನೆ ಬಂದು ನಿಂದು
ನಗೆಯ ಮೊಲ್ಲೆ ಮುಗುಳಿನೊಡನೆ
ಸೊಗಸ ಸುತ್ತು ಹರಹುವೆ,
ಹೊಗರನೊಗೆಯುತಿರುವ ನಿನ್ನ
ಬೊಗಸೆಗಣ್ಣ ತಿರುಹುವೆ ! ೩

ಕೆಳೆಯು ಬೆರೆತ ನಲುಮೆ-ನೋಟ ನನ್ನೆದೆಯಲಿ ನಿಲಿಸಿ—
ಬಳಿಯಲಿ ನೀನಿರಲು ಚೆಲುವೆ ಸಲುಗೆ ನುಡಿಯನುಲಿಸಿ—
ಎಲ್ಲೆಲ್ಲಿಯು ಕುಂದ ಕಾಣೆ,
ಸುಳ್ಳಲ್ಲವೆ ದೇವರಾಣೆ!
ಕಿರಿಯ ಮೂಗ ಹರವು ಬಾಯ
ಕೊರೆಯ ಮರೆತೆ ಬಿಡುವೆನೆ,
ಕುರುಳ ಬಣ್ಣ ಕೊರಳ ಸಣ್ಣ
ಯಾವುದೇನ ಕಾಣೆನೆ!  ೪

ಹೊರಗೆ ಕಾಣದಿರುವಾವುದೊ ಮುರುಗ್ಗದೊಂದು ಬೆರೆದು—
ಕೊರತೆಯ ಕಳೆದಿಹುದು 'ನೀನೆ ಸರಿಯು!' ಎನಿಸುತಿಹುದು!
ಕಿರಿಯತನದಿ ತುಂಬುವೆರೆಯ
ನಿರುಕಿಸಲಂದೆನ್ನ ಹೃದಯ
ಆರಳಿ ಸಕ್ಕು ನಲಿದ ಪರಿಯ
ಅರಿಕೆ ನನಗೆ ಇರುವುದೆ;
ಮರುಳು! ನಿನ್ನ ನೋಡಲದುವೆ
ತೆರದಿ ಒಗೆಯು ನಗುವುದೆ!  ೫

ಜನಕೆ ಕಾಂಬುದೇಕೆ ಚೆನ್ನೆ, ನನಗೆ ಕಾಣವೇಕೆ ಕುಂದು?
ಜನದ-ನನ್ನ ನೋಟಗಳಿವು ಎಸಲೆ ಬೇರೆ ಬಗೆಯವೆಂದು?
ಚಣಕೆ ಚಣಕೆ ಹೊಸ ಚೆಲುವನೆ
ನಿನ್ನಲಿ ನೋಡುವೆನೆ ಚೆಲುವೆ,
ಎನಿತು ನಿಟ್ಟಿಸಿದರು ಕಣ್ಗೆ
ಮನಕೆ ತಣಿಸದಿಲ್ಲ ಒಲವೆ!
ಎಲ್ಲಿಯ ನುಡಿ, ಕೊರತೆ ನಿನ್ನ ಚೆಲ್ವೊಳಗಿಹುದೆ?
ಎಲ್ಲ ಸುಳ್ಳು! ಜನರ ಕಂಗಳಲ್ಲಿಯೆ ಇಹುದೆ!

---

# ಹಳ್ಳಿಗನ ಹಾಡು

ನಗ-ನಗತಽ ನಡಿದಿಯೆಲ್ಲೆ ನಾರೀ—ವೈಯಾರೀ
ಮಿಂಚಿನ ಗೊನಿ ತೂರಿ—ನಗ-ನಗತಽ....
ಕಣ್ಣನೋಟ ಕಾಮನ ಬಿಲ್ಲಾ
ಕೆನ್ನಿಯೆರಡು ಕನಡೀಹಳ್ಳಾ....
ತುದಿಜರದ ಕುಬಸ ನಾ-ಜೂ-ಕಾ
ಎದಿಮ್ಯಾಗಿನ ಸೆರಗಿನ ಝೋ-ಕಾ
ಎದಿಗಿರಿದ್ಹಾಂಗಾದಿತು ಬಾ-ಕಾ
ಉರವಽಸಿ ರಂಭಿ ಮೇನ-ಕಾ
ಇಲ್ಲ ಯಾರು ನಿನ್ನ ಸರಿ ತೂ-ಕಾ
ಮಾತಾಡ ಸಿಂತು ಜರಾ ಸೋ-ಕಾ !
ಪೋಹಡ ಗಿಣೀಯೇ—ಮಾ-
ಯದಮಣೀಯೆ—ನಗ-ನಗತಽ.... ೧

ಇಳೀಬಿಸಿಲ ಯಾಳೇದಾಗಽ
ಹೊಳಿನೀರಿಗೆ ನೀ ಹೊಂಟಾಗ—
ಅಂದೊಮ್ಮೀ ಮೊದಲ ನೋಡಿ,
ನನ ಕಣ್ಣೂ-ಮನಸೂ ಕೂ-ಡಿ
ನಿನ್ನ ಕಡಿಗೇ ಬಂದೂ ಓ-ಡಿ
ಮಾಡಿದಿಯೇ ಮಾಟಾ ಮೋ-ಡಿ
ಕಣ್-ಮನಸಿಗೆ ಹಾಕಿದಿ ಬೇ-ಡಿ
ಎಂಥಾಕೇ ನೀ ಕಿಡಿಗೇ-ಡಿ
ಕಡಿಗಣ್ಣಽ ಬಾಣಾ—ಹೊಡಿ-
ಯೂದಽ ಪ್ರಾಣಾ ! ನಗ-ನಗತ....ಽ
ನಗ-ನಗತಽ ನಡಿದಿಯೆಲ್ಲೆ ನಾರೀ-ವೈಯಾರೀ
ಮಿಂಚೀನಽ ಗೊನಿ ತೂರಿ—ನಗನಗತಽ.... ೨

---

# ವನಮಲ್ಲಿಕೆಯ ಸೊಲ್ಲು

೧

ಅರಳಿ ನಿಂದಿಹೆನು..ಹುರಳ ಹೊನಲನ್ನು....
ಬರಿದೆ ಗಾಳಿಯಲಿ..ಹರಡುತಿಹೆ ನಾನು!
ಮುಳ್ಳ ಕೊಂಪೆಗಳು..ಕಳ್ಳಿ-ಕಂಟಿಗಳು....
ನನ್ನ ಮೆಯ್ ಸಿರಿಯ..ಮಾಡಿಹವು ಮರೆಯ....!

೨

ಮಾಲಿಗರು ಬಂದು..ಮಲರ ತಿರಿವಂದು....
ನನ್ನ ಮುಸುಕಿರುವ..ಮುಳ್ಳಮೆಳೆ ಮುರಿದು....
ಒಡೆಯನಡಿಯೆಡೆಗೆ..ಒಯ್ಯಬಹುದೆಂಗೆ—
ನಡೆಯೆ ಬಿಡುತವರು..ಸುಯ್ದು ನಾ ನಿಂದೆ....!

೩

ದುರುಳದುಂಬಿಗಳು..ಹುರುಳನೆಲ್ಲವನು....
ಸುರಿಯುವಾಸೆಯಲಿ..ಸುಳಿಯುತಿಹವಿಲ್ಲಿ;
ಚೆಲುವಿನದು ನಿಲಯ..ನನ್ನದೀ ಕಾಯ....
ಕಾಡ ಹುಳುಗಳವು..ಕೊರೆಯಬರುತಿಹವು....!

೪

ಅಂದವಿರದಿರುವ..ಗಂಧವಿರದಿರುವ....
ಕೀಳು ಕುಸುಮಗಳೂ..ಹೊಂದುವುವು ಪದವ;....
ದೇವನೊಡನಾಡಿ..ಜೀವದೆಡೆ ನೀಡಿ....
ಧನ್ಯವೆನಿಸುವುವು..ತಮ್ಮ ಜೀವನವು....!

೫

ನನ್ನ ಜನ್ಮವಿದು..ಮಣ್ಣಲಿಯೆ ಜೀರ್ಣ
ಮಣ್ಣೊ ಆಗುವುದು!..ಏನ ಮಾಡುವುದು ?....
ಬಾರ ಬಿರುಗಾಳಿ..ನನ್ನ ಮೊರೆ ಕೇಳಿ....
ಬಾರ ಬಿರುಗಾಳಿ..ಭೀಕರತೆ ತಾಳಿ.... !

೬

ಭೋರೆಂದು ಬೀಸು..ತೋರ ಸೆರೆ ಬಿಡಿಸು.... !
ತೂರು ಬಾಂದಳಕೆ..ಸೇರಿಸಾ ಪದಕೆ.... !
ಒಡೆಯನಡಿಗಳೊಳು..ಬೆಡಗಿನೀ ಬಾಳು....
ಮುಡಿಪಾಗಿ ಇಡುವೆ..ಪೂರ್ಣತೆಯ ಪಡೆವೆ.... !

*     *     *

ಅರಳಿ ನಿಂದಿಹೆನು..ಹುರುಳ ಹೊನಲನ್ನು
ಬರಿದೆ ಗಾಳಿಯಲಿ..ಹರಡುತಲೆ ಇಹೆನು !



*

# ಮಾಲೆಗಾರನ ಮಾತು

ಅರಸಿಯರಸಿದೆನು ನಾನು....
ಸುರುಳುಳ್ಳ ಹೂವೊಂದನು;
ಮುರುಕು ಗುಡಿಲನು ಕೂಡ
ಅರಮನೆಯೊಲಾಗಿಸುವ
ಸುರಪಾರಿಜಾತಕವನು ! ೧

ಹೊರಗಿನಾ ಹೊಳಪ ಕಂಡೆ....
ಮರುಳ ನಾ ಬೆರಗುಗೊಂಡೆ;
ಸುರಲೋಕದರಳೆಂದೆ
ಬರಿದೆ ಭೂಮಿಯಲಿ ಬಿದ್ದೆ
ಸುಧೆಯೆಂದು ಸುರೆಯನುಂಡೆ ! ೨

ರಾಯ ದೋಂಟಗಳ ಬಿಟ್ಟು....
ಸುತ್ತು ಮುಳ್ಳಬೇಲಿಯಿಟ್ಟು....
ಅಡವಿಯೊಳಗಡಗಿದ್ದ
ಬೆಡಗಿನಲರನು ನೋಡಿ
ನಿಂತೆ ಕಣ್-ಮನವ ಕೊಟ್ಟು ! ೩

ಬನದ ಹೂವಾದರೇನು ?....
ಎನಿಸೆ ನಿನ್ನಿಂದಮರನು;
ಧನಬೇಡ, ಧರೆಬೇಡ,
ಜನಬೇಡ, ಜೊತೆಬೇಡ !
ಮನ ಬೇಡುತಿದೆ ನಿನ್ನನು ! ೪

*

ಮುಳ್ಳುಗಳ ಕೊಂಪೆಯಿರಲಿ....
    ಕಳ್ಳಿ-ಪಳೆ-ಕಂಟಿಯಿರಲಿ.... !
ಪೊಳ್ಳು ನನ್ನೆದುರೆಲ್ಲ,
ತಳ್ಳಿಹಾಕುವೆನವನು. .
    ಕೋಟಿ ಕಂಟಕವು ಬರಲಿ !  ೫

ನಿನ್ನನೇ ಪಡೆವ ಬಯಕೆ....
    ನಿನ್ನನೇ ಮುಡಿವ ಬಯಕೆ!
ನನ್ನ ಮನ ತುಂಬಿಹುದು,
ನನ್ನೆದೆಯು ತುಳಿಯುವುದು,
    ನನ್ನ ಕೈಗಿಂದು ನಿಲುಕೆ!  ೬

ಒಡೆಯನಡಿಗೇರಿಸುವೆನು....
    ನನ್ನ ಮುಡಿಗೇರಿಸುವೆನು;
ಬದುಕಿನಲಿ ಬರ್ದಿಲವನು
ಸದೆಗೈದು ತೂರುವೆನು
    ಬಾ ಕೈಗೆ ಬೇಗ ನೀನು!  ೭

ಅರಸಿಯರಸಿದೆನು ನಾನು....
    ಹುರುಳುಳ್ಳ ಹೂವೊಂದನು;
ಮುರುಕು ಮನ-ಮನೆಗಳನು
ಸುರಲೋಕವಾಗಿಸುವ
    ಅರಳು ಅಹುದಹುದು ನೀನು!  ೮

---

# ತೆರೆಮರೆಯ ಹೆಣ್ಣು

ಮುರುಗುಸೀ ಜರಿಯ ತೆರೆಮರೆಯಲ್ಲಿ ಹೊರಟಿಹಳು
ಸಿರಿವಂತಿ ಯಾವಳಿವಳು ?
ಚರಣಗಳ ನೇಪುರದ ಸರಪೆನಿತು ಸವಿಯಿಹುದು—
ಸವಿಗಾತಿಯಾವಳಿವಳು ? ೧

ಬೆಲೆಯುಳ್ಳ ತೆರೆಸಳೆದು ನಡೆದಿರುವ ಈ ಹೆಣ್ಣು
ಚೆಲುವಿನಲಿ ಎಂತಿರುವಳೊ !
ಬೆಳುದಿಂಗಳನು ಹಾಲ ಹೊಳೆಯಲ್ಲಿ ತೊಳೆ-ತೊಳೆದು
ಗೈದ ಗೊಂಬೆಯೊಲಿರುವಳೊ ? ೨

ಇವಳ ತೊಳಗುವ ಮೊಗಕೆ ಬೆಳುಗಾಲ ತುಂಬುವೆರೆ
ಸಮನಾಗಿ ತೋರಬಹುದೆ ?
ಇವಳ ಮೆಯ್-ಮಿದುತನಕೆ ಮಲ್ಲಿಗೆಯ ಮೊಲುವಾಸ
ಹೋಲಿಸಲು ಸರಿದೋರದೆ ? ೩

ಕೆನ್ನೆಗಳ ಕಡುಗೆಂಪು ಸಂಜೆಮೋಡದ ಕೆಂಪು-
ಬಣ್ಣ ಕೊರೆಯಾಗಬಹುದೆ ?
ಕಣ್ಣ ನಗೆನೋಟಕ್ಕೆ ತಾರಗೆಯ ಹೊಸ ಹೊಳಪು
ಮುಂದಾಗಿ ನಿಲ್ಲಬಹುದೆ ? ೪

ಇವಳ ನುಣ್ಪಿಗೆ ಹಾಲ ಕೆನೆಯಾದರೂ ಹೆದರಿ
ಹಿಂಜರಿಯ ಬಹುದಲ್ಲವೆ ?
ಇವಳ ಮೈಸಿರಿಗೆ ಸುಗ್ಗಿಯ ದಿನದ ಬನಸಿರಿಯು
ಸಮವೆನಲು ಒಪ್ಪಲ್ಲವೆ ? ೫

ಇವಳ ಮೆಲುನುಡಿಯಿಂಪು ಗೋವಳನ ಪೊಂಗೊಳಲ
ಸವಿಸರಕೆ ಸರಿಯೆನಿಸದೆ ?
ಇವಳ ಬೆಡಗಿನ ಸೊಂಪು ಮಳೆಗಾಲ ಸೆಳೆಮಿಂಚ
ಹಿಂದೆ ಹಾಕದೆ ಇರುವುದೆ ? ೬

ಬಣ್ಣದುಟಿ ಬಾಯನ್ನು ಸುಳಿಗುರುಳ ಸೊಬಗನ್ನು
ನನಗೆ ಹೊಗಳಲು ಬರುವುದೆ ?
ಹೆಣ್ಣು ಇವಳಾವಳೋ ಬಲು ಚೆಲುವೆಯಿರಬೇಕು;
ತೆರೆಯಿಲ್ಲದಿರಬಾರದೆ ? ೭

* * *

ಬೆರಗಾಗಿ ನಾನು ಈ ತೆರದಿ ಬಗೆಯುತಲಿರಲು
ಬಿರುಗಾಳಿ ಬೀಸಿ ಹೋಯ್ತು;
ತೆರೆಯು ಗಾಳಿಗೆ ಹಾರಿ, ಮೆಯ್ಮುಸುಕು ನಸು ಜಾರಿ
ಮರೆಯ ಹೆಣ್ಣದು ತೋರಿತು. ೮

ಕರಿಯ ಮಣ್ಣಿನ ಬಣ್ಣ ಕೊರಡಂತೆ ಇರುವ ಮೈ
ಹೂ ಬೆರೆತ ಹಸಿರುಗಣ್ಣು—
ತೆರೆಬಾಯಿ ಬಿರುನೋಟ ಕಿರುಮೂಗು ಉರಿಮೋರೆ
ಇರುವುದನು ಕಂಡೆ ನಾನು ! ೯

ಸಲ್ಲದಾ ಒಡವೆಯನು ಬಲ್ಲಂತೆ ಬಣ್ಣಿಸಿದ
ಬಗೆಗೆ ನಾ ನಗುತ ನಿಂದೆ;
‘ ಸುಳ್ಳಲ್ಲ ಕಂಗುರುಡ ಬೇವನ್ನು ಬೆಲ್ಲವನು
ತಿಳಿಯುವುದು ’ ಎಂದು ನುಡಿದೆ. ೧೦

*

# ನಿನ್ನ ನಗೆ

೧

ನಗುತಿರು, ನಗುತಿರು, ನಿಲಿಸದೆ ನಗುತಿರು,
ನಿನ್ನ ನಗೆಯೆ ಬಾಳಿನೊಸಗೆ;
ನಿನ್ನ ನಗೆಯು ಸುಳಿ ಭಾವದ ವೈತಾಳಿ,
ನನ್ನ ನಿನ್ನೊಲುಮೆಗೆ ಬೆಸುಗೆ!

೨

ಅಲರಿನಾಶೆಗೆ ನಲ್ಲೆ, ಬಲುಬಲು ಗಿಡ-ಬಳ್ಳಿ
ಬೆಳಸಿದೆ ಸಾಲು-ಸಾಲಾಗಿ
ತಳಿತುವು ಚಿಗಿತುವು, ಎಲೆ-ಬಲೆಯಾದುವು,
ಅರಳಲಿಲ್ಲೊಂದು ಹೂವಾಗಿ!

೩

ಗಿಡ-ಗಿಡದಡಿ ಕಟ್ಟೆ, ಎಡೆಯೆಡೆ ಮಂಟಪ,
ಬಳ್ಳಿ-ಬಳ್ಳಿಗೆ ಹಂದರಗಳು—
ಒಡನಾಡಿಗಳ ಕೂಟ ಸೊಗಸೆನ್ನುವುದು ತೋಟ;
ನನಗದು ಬರಿ ಹಾಳು ಹಾಳು!

೪

ಕಳವಳಿಸಿದೆನೇಸೋ ಅಳಲಿದೆ, ತೊಳಲಿದೆ,
ಫಲವಾವುದನು ಕಾಣಲಿಲ್ಲ!
ಚೆಲುವೆ, ನಿನ್ನಯ ಚೆಲ್ವ ಮೆಲುನಗೆ ಕಂಡಂದು
ಅರಳಿದಲರೆ ತೋಟವೆಲ್ಲ!

*

೫

ನಿನ್ನ ನಗೆಯೊಳಾವ ಮೋಡಿಮಂತ್ರವೆ ಚೆನ್ನೆ !
ಅಂದೊಂದೇ ದಿನದ ಮಾತಲ್ಲ;
ಒನ್ನಗೊಂಡೆದೆ-ಮನ ತಣಿಸುವ ರಸವಾಯ್ತು—
ನೀ ನಕ್ಕ ಕ್ಷಣ-ಕ್ಷಣವೆಲ್ಲ !

೬

ನಗುತಿರು, ನಗುತಿರು, ಮೆಲುನಗೆ ನಗುತಿರು,
ನಿನ್ನ ನಗೆಯೆ ಜೀವದೊಸಗೆ;
ಮುಗುಳುನಗೆಯು ಸುಳಿ ತೆಂಕಣ ಸುಳಿಗಾಳಿ,
ಕಿರುನಗೆ ಕೋಲ್ಮಿಂಚಿನೆಸುಗೆ !



# ಮರಳಿ ಬಂದ ಬಳಿಕ

ಆತ:—

೧

ನಾವಿಬ್ಬರೂ ಕೂಡಿ ಇರುವಾಗ ನನ್ನ ಚೆನ್ನಿ,
ನೋವಂದರೇನ—ನಗಿಯೇನ....
ನೋವಂದರೇನ—ನಗಿಯೇನ—ಈ ತೂಕ
ನಿಲುಕಿದ್ದಿತೇನ ಮನಸನ್ನ ?

೨

ಹೋಗ್ಹೋಗಿ ಬರುತಿರುವ ಹೊಸ-ಹೊಚ್ಚ ದಿನಗಳು
ಹೆಚ್ಚು-ಹೆಚ್ಚಾದ ಹಿಗ್ಗೀನ....
ಹೆಚ್ಚು-ಹೆಚ್ಚಾದ ಹಿಗ್ಗೀನ ಹೊರಿ ಹೊತ್ತು
ತುಂಬತಿದ್ದ್ವ ಬರಿ ಮನಸ !

೩

ಹರಿಯೂವ ಹೊಳಿಯಾಗ ಬುರುಡಿಗುಂಬಳ ಬಿಗಿದು
ತೆರಿ ಮ್ಯಾಗ ತೇಲಿ ಹೊರಟ್ಹಾಂಗ....
ತೆರಿ ಮ್ಯಾಗ ತೇಲಿ ಹೊರಟ್ಹಾಂಗ—ನನ ಬದುಕು
ನಡಿದಿತ್ತು ಕಾಲ ಕಡಲಾಗ !

ಆಕೆ :—

೧

ನಾವಿಬ್ಬರೂ ಕೂಡಿ ಇರುವಾಗ ನನ ನೀರ
ನಾ ಬ್ಯಾರೆ ಮತ್ತ ನೀ ಬ್ಯಾರೆ....
ನಾ ಬ್ಯಾರೆ ಮತ್ತ ನೀ ಬ್ಯಾರೆ— ಈ ಮಾತು
ನೆನಪಾಗತಿತ್ತೆ ಎಂದಾರೆ ?

೨

ಯಾತಕ ಹೋದೇನೊ, ಘಾತೂಕ ತಪ್ಪೀಗೆ
ನಾ ಬ್ಯಾರೆ ನಲ್ಲ ನೀ ಬ್ಯಾರೆ....
ನಾ ಬ್ಯಾರೆ ನಲ್ಲ ನೀ ಬ್ಯಾರೆ ಎಂಬರಿವ
ಮೂಡಿಸಿದರಲ್ಲೆ ಸಮ್ಮವರೇ !

೩

‘ನಾಬ್ಯಾರೆ’ ಎಂದಾಗ, ಸಡಿಗೀತು ಸರಸರ,
ನೀರಾಗ ಬಿದ್ದು ಮುಣುಗುವ....
ನೀರಾಗ ಬಿದ್ದು ಮುಣುಗವರ ಪರಿ ಉಸುರು—
ತೊಡಕಿ; ಮಿಡುಕೀತು ನನ ಜೀವ !



# ಭಾವಭಂಗ

ಯಾವುದೊ ಬಗೆಯೆದೆಯ ಮಿಡಿಯೆ,
ಭಾವ ಹಾಡ ಜಾಡ ಹಿಡಿಯೆ,
ಕಾಗದ-ಲೆಕ್ಕಣಿಕೆ ಕೊಂಡು ಬರೆಯ ಕುಳಿತೆನು;
ಬರೆವ ಮೊದಲು ಬದಿಗೆ ಸಹಜ ಕಣ್ಣನೆಳೆದೆನು. ೧

ಹೊಸತು ಸೀರೆಯಂಚಿನಿಂದ
ಹೊಸತಿಲು ಪಡೆದಿದ್ದಿತಂಪು;
ತಿಳಿಯದಂತೆ ನೋಟ ಮೇಲು-ಮೇಲಕೋಡಿತು;
ಮೆಲುನಗೆ ನೆಲೆಗೊಂಡ ಮೊಗವನೊಂದ ನೋಡಿತು. ೨

ಹಬ್ಬನಂದು....ಹೊಸತು ಉಡಿಗೆ!
ಹುರುಳಿನ ಹೂಮಾಲೆ ಮುಡಿಗೆ!
ಹರಳಿನ ಕಿವಿಯೋಲೆ ಕೈಯ ಚಾಚಿ ಕರೆಯಿತು,
ಮಿರುಗ ಹರಿಸಿ ಮೂಗಬೊಟ್ಟು ಮನವ ಕೊರೆಯಿತು! ೩

ಇಂದಿನ ಈ ಕವಿತೆ ರಸಿಕ-
ವೃಂದದ ಮನ ಸೆಳೆವುದೆಂದು
ಬಗೆದು ಹಿಗ್ಗಿ ಕುಣಿದ ಮನವು ಮೈಯ ಮರೆಯಿತು,
ನಗುತ ನಿಂತ—ಎದುರ—ಮೊಗದ ಕಡೆಗೆ ಹರಿಯಿತು! ೪

ಎದೆಯ ಮಿಡಿದ ಭಾವ ಯಾವ
ಬದಿಗೆ ಹೋಗಿ ಹುದುಗಿತೇನೊ!
ಬರೆಯಲೆಂದು ಹಿಡಿದ ಹಾಳೆ ಕೆಳಗೆ ಜಾರಿತು,
ಬಲಗೈ-ಲೆಕ್ಕಣಿಕೆ ಜೇಬಿನೊಳಗೆ ಸೇರಿತು! ೫

ಅಯ್ಯೊ....! ಯಾರು?....ಕರೆದ ಕೂಗು!
ಬೆಚ್ಚಿಬಿದ್ದ ಎದೆಗೆ ನಡುಗು!
ಮೆಲುನಗೆಮೊಗ ಅಣಕಿಸುತಲ್ಲಿಂದ ಅಡಗಿತು,
ಬರಿಯ ಹಾಳೆ ಬಿದ್ದೆಡೆಯೊಳೆ ಬೈಯತೊಡಗಿತು! ೬

---

# ನಮಗಿದೇ ಲೀಲೆ!

೧

ಹೆಣೆಯುವಾ ನಲ್ಲೆ, ಹೊಸ ಮಲರ ಮಾಲೆ!
ನಾರೆಳೆಯ ಕುಡಿಯೊಂದ ನೀ ಹಿಡಿ,
ಬೇರೆ ಕುಡಿಯನು ನಾನು ಕೊಳ್ಳುವೆ;
ಪೇರಿಸುವ ಈ ಅರಳಿದರಳನು
ನೀರೆ ಕಾಲವನೇಕೆ ತಳ್ಳುವೆ?
ಹೆಣೆಯುವಾ ನಲ್ಲೆ, ಸುರಭಿ ಸುಮಮಾಲೆ!

೨

ಅರಳ ಜೀವನವು.... ಒಂದು-ಅರೆ ದಿನವು!
ಇಳೆಯ ಚೆಲುವೆಲ್ಲವನು ತನ್ನೊಳು
ಸೆಳೆದುಕೊಂಡೇಳುವುದು ಮೆಲ್ಲಗೆ;
ಗಳಿಗೆಯಾದರು ಚೆಲುವಿನೊಂದಿಗೆ
ಕೆಳೆಯ ಬಯಸುವುದುಚಿತವಲ್ಲವೆ?
ಹೆಣೆಯುವಾ ನಲ್ಲೆ,—ಮುಡಿಯುವಾ ಮಾಲೆ!

೩

ಬರಿಯ ನಾರಿನೆಳೆ.... ಇರಲು ಏನು ಬೆಲೆ?
ಚೆಂದ-ಚೆಂದದ ಬಣ್ಣದರಳುಗ-
ಳೊಂದಿಸುತ ಮಾಲೆಯನು ಕೋದರೆ
ಹೊಂದುವುದು ಈ ನಾರು ಪದವಿಯ;
ಸುಂದರತೆಯೊಡನಾಟವಿಂತಿರೆ—
ಹೆಣೆಯುವಾ ನಲ್ಲೆ, ಸರಸ ಸುಮಮಾಲೆ!

೪

ಹೂ ತರುವ ಮಾಲಿ....ತರಲಿ ತರದಿರಲಿ;
ದಾರಿಯವನದು ಬೇಡ, ತೋಟವ
ಸಾರಿ ನಾವೇ ಸೊಗಸಿನಲರನು
ಆರಿಸಾರಿಸಿ ತರುವ, ದಿನದಿನ
ನಾರೆಳೆಗೆ ಚೆಲುವನ್ನು ತುಂಬುವ!
ಹೆಣೆದು ಹೂಮಾಲೆ, ತಣಿಯುವಾ ನಲ್ಲೆ!

೫

ಹೆಣೆವ ಹೂಮಾಲೆ....ತಣಿಯುವಾ ನಲ್ಲೆ!
ನಾರೆಳೆಯ ತುದಿಯೊಂದ ನೀ ಹಿಡಿ,
ಬೇರೆಯಾ ತುದಿ ನಾನು ಹಿಡಿಯುವೆ;
ಸೇರಿಸುವ ಈ ಆರಳಿದರಳನು
ನೀರೆ, ಕಾಲವನೇಕೆ ಕೆಡಿಸುವೆ?
ನಮಗಿದೇ ಲೀಲೆ.... ಹೆಣೆವುದೀ ಮಾಲೆ!



# ಪ್ರೀತಿ-ಪೌರ್ಣಿಮಾ

( ಆತ-ಆಕೆಯರ ಮಾತು )

‘ ಚೆಲುವೆ, ನೋಡಿದು ನೋಡು, ಹೂನಗೆಯ ಮಾಲೆ ! ’
‘ ಬಲು ಸೊಗಸು, ಒಗೆಗಾರ ನನಗೆ ತಂದೆಯಲೇ ? ’

‘ ಇಲ್ಲ, ಇಂದಿದೆ ವ್ರತವು; ದೇವಿಯಾ ಪೂಜೆ ! ’
‘ ಎಲ್ಲ ಹುಸಿ, ನಿನಗೊಂದು ವ್ರತದ ಗೋಜೆ ? ’

‘ ಗೊತ್ತಿಲ್ಲವೇ, ಪ್ರೀತಿ ಪೌರ್ಣಿಮೆಯ ವ್ರತವು ? ’
‘ ಗೊತ್ತಿಲ್ಲ; ಈ ವ್ರತಕೆ ಯಾರು ದೈವತವು ? ’

‘ ದೈವತಕೆ ಹೆಸರೆ.... ಹಾಂ ! ಶೃಂಗಾರ ಗೌರಿ ! ’
‘ ಅಹುದೇನು ? ಹೇಗವಳ ರೂಪ–ಗುಣದ ಪರಿ ? ’

‘ ಗುರು-ಶುಕ್ರರೇ ಕಣ್ಣು, ಸುಧೆಯೆ ಚೆಂದುಟಿಯು,
ಕುರುಳ ಸುರುಳಿಯು ಕುಣಿತ ಸಾಗಿರುವ ಹಣೆಯು;
ಕನ್ನಡಿಯು ಕೆನ್ನೆಗಳು ಮೆಲುನಗೆಗೆ ರಂಗ;
ನನ್ನ ಅರಿಕೆಗಿದಿಷ್ಟೆ ಗೊತ್ತು ಅವಳಂಗ ! ’

‘ ಸರಿಯಾಯ್ತು, ಈ ವ್ರತಕೆ ಯಾವ ಫಲವು ? ’
‘ ಯಾವ ಫಲವೆ ?.... ಇಹುದು ಬಾಳಿಗೇ ಗೆಲವು ! ’
‘ ಹೊಸಬಗೆಯ ಪೂಜೆಯಿದು, ಮಾಡಬೇಕಿದನು ! ’
‘ ಅದಕೆಂತಲೇ ತಂದೆ ಈ ಮಾಲೆಯನ್ನು ! ’

*　　　*　　　*

‘ ಏನಿದೇನಿದು ಹುಚ್ಚು ?.... ನನಗೇಕೆ ಮಾಲೆ ? .... ’
‘ ನಿನಗಲ್ಲ.... ಶೃಂಗಾರ ಗೌರಿಗಿದು ನಲ್ಲೆ ! ’
‘ ಜಾಣ !.... ನಡೆಯಿನ್ನು, ನಾ ಮಾತುಗಳನೊಲ್ಲೆ ! .... ’
‘ ಮಾತೀಗ ನನಗೆಲ್ಲಿ ಬೇಕಿಹುದು ನಲ್ಲೆ.... ? ’

---

# ಹಚ್ಚಽ ದೀಪಾ !

ಪಲ್ಲವಿ—

ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ !
ಮುಚ್ಚಂಜೆ ಮುಗಿದೀಗ
ಮುಚ್ಚು ಹಾಕಿತು ಮಬ್ಬು !
ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ !

ಇಂದಿನ ಸಂಜೆಯು ಕೆಂದುಬಣ್ಣದ ಮುಗಿ-
ಲಂದ ನೋಡುತ ಹೊರಸಾರಿದೆವೆ;
ಒಂದೇ ಗಳಿಗೆ ಸಂಜೆಯಂದದ ಸಡಗರ
ಎಂದರಿತರು ಮನ ಮಾರಿದೆವೆ....ನಲ್ಲೆ,
ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ ! ೧

ಹೊರಗೆಲ್ಲ ಸುತ್ತಲು ಹರಡಲು ಕತ್ತಲು
ಬಿರುಗಾಳಿ ಬರ್ರೆಂದು ಬೆದರಿಸಲು—
ಮರಳಿ ನಮ್ಮನೆಯೆಂದಾತುರದಿ ಒಂದರು ಇಲ್ಲೂ
ಇರುಕಿಸ ಕೆಳದಿಯೆ ಅರಸಿಯುಳು....ನಲ್ಲೆ,
ಹಚ್ಚಽ ದೀಪಾ....ನಲ್ಲೇ,....ಹಚ್ಚಽ ದೀಪಾ! ೨

ರಂಗು-ರಂಗಿನ ಹೂವ ತೊಂಗಲ ಗಿಡ-ಬಳ್ಳಿ
ಹಿಂಗಿ ಹೋಗಿವೆ ಮಬ್ಬಿಸಂಗದಲಿ—
ಕಂಗಳ ಕುಣಿಸುವ ರಂಗವಲ್ಲಿಗಳಲಿ
ಸಿಂಗರಿಸಿದ ನೆಲಪಂಗಳೆಲ್ಲಿ ?....ನಲ್ಲೆ
ಹಚ್ಚಽದೀಪಾ....ನಲ್ಲೇ,....ಹಚ್ಚಽ ದೀಪಾ ! ೩

ಹಸನು ಬಣ್ಣಗಳಿಂದ ಹೊಸ ಹೊಸ ಕಳೆಯಿಂದ
ಎಸೆವ ಬೊಂಬೆಗಳ ರೂಪಿಸಿದ ಗೋಡೆ—
ಮಸಿ ಮೈಯ ಮಬ್ಬು-ರಕ್ಕಸಿ ತನ್ನ ಮುಸುಕಿನ
ಪಸರಿಕೆಯಲಿ ಬೆಸೆದೆಸಕಽ ನೋಡೆ....ನಲ್ಲೆ,
ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ! ೪

ನೀನಿಟ್ಟ ವೀಣೆಯು ತಾಣವದೆಲ್ಲಿಯೊ!
ಕಾಣೆನು ನಾನಿಟ್ಟ ಕೊಳಲೆಡೆಯು!
ಗಾನಕಾದರು ಬೆಳಕೇನು ಬೇಕಿಲ್ಲವೆ?
ಜಾಣೆ ನೀನೆರಚೀಗ ಹೊಂಬುಡಿಯ....ನಲ್ಲೆ,
ಹಚ್ಚಽ ದೀಪಾ....ನಲ್ಲೇ,....ಹಚ್ಚಽ ದೀಪಾ! ೫

ನಡುಮನೆ ಪಡುಮನೆ ಅಡುಮನೆ ನಿಡುಮನೆ
ಕಡೆಮನೆ ಮುಮ್ಮನೆ ಹಿಮ್ಮನೆಯು—
ಎಡೆಗೊಂಡ ಮಬ್ಬನು ಕೆಡಿಸಿ ಬೆಳಕ ಬೀರೆ
ನೆಡು ಮನೆಗೊಂದು ರನ್ನದ ತೆನೆಯಽ....ನಲ್ಲೆ
ಹಚ್ಚಽ ದೀಪಾ....ನಲ್ಲೇ,....ಹಚ್ಚಽ ದೀಪಾ! ೬

ಒಳಗೆಲ್ಲ ತೊಳಗಿಸಿ ಬೆಳೆದ ಕಿರಣಕುಲ
ಬೆಳಕುಕಂಡಿಗಳಿಂದ ಹೊಳಪ ತೂರಿ,
ತೊಳೆದು ಹೊರಗಿನಾ ಕತ್ತಲೆಯ ಕೊಳೆಯನೆಲ್ಲ
ಬೆಳಗುತಲಿರುವಂತೆ ಬಾನೊಳೇರಿ ...ನಲ್ಲೆ,
ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ! ೭

* * *

ಮುಚ್ಚಂಜೆ ಮುಗಿಯಿತು, ಮುಚ್ಚಿಹಾಕಿತು ಮಬ್ಬು
ಹಚ್ಚಽ ದೀಪಾ....ನಲ್ಲೇ....ಹಚ್ಚಽ ದೀಪಾ!

---

## ನನ್ನ ಗಾಂಧಾರಿಗೆ:

ಕಣ್ಣು ತೆರೆ, ಕಣ್ಣು ತೆರೆ, ಕಣ್ಣು ತೆರೆ ಜೊತೆಗಾತಿ!
ಕಣ್ಣುಗಳ ಮುಗಿದು ಬಾಳುವುದಿದೆಲ್ಲಿಯ ರೀತಿ?

ಕತ್ತಲೆಗೆ ಹೆದರಿ ಕಂಗಳನು ಮುಚ್ಚಿಹೆ; ನಿನಗೆ
ಗೊತ್ತಿಲ್ಲವೇ ತೆರೆದ ಕಣ್ಣು ಹದನು?
ಕಾರಿರುಳ ಕರಗಿಸುತ ದಾರಿದೋರುವ ಶಕ್ತಿ-
ಸಾರ ಮಲಗಿಹುದಲ್ಲಿ ಎಬ್ಬಿಸದನು! ೧

ಮುಂಗಾರ ಮೊಳಗುಗಳ ಕೇಳಿ ಬೆದರುತಲಿರುವೆ;
ಸಿಂಗವೋ, ಹುಲಿಯೊ, ರಕ್ಕಸಿಯೊ ಎನುವೆ!
ಕಂದೆರೆದು ನೋಡು ನೀ, ಬೆಳೆ ತರುವ ಮಳೆನೋಣ
ಬಾಂದಳದಿ ಕುಣಿವುದನು ಕಂಡು ತಣಿವೆ! ೨

ನಿನಗಾಗಿ ಹಲವು ಬಗೆಯರಳುಗಳು ಅರಳಿಹವು,
ನಿನಗಾಗಿ ನಗುತಿಹವು ಬಾನ ತಾರೆ;
ನಿನಗಾಗಿ ಸಂಜೆ-ಮುಂಜಾವು ಮೆರೆಯುತಲಿಹವು,
ನಿನಗೆಂದೆ ಎನಿತೆನಿತೊ ಸೊಗಸು ಸೂರೆ! ೩

ತಾಯಿತನ ಕೈಯೊಡ್ಡಿ ಬಾಯ ಬಿಡುತಿದೆ ನಿನಗೆ;
ಕಾಯಿಗಳ ಹಣ್ಣೊಳಿಸುವವಳು ನೀನೆ!
ನೀನೆ ಕಂಗುರುಡಿಯಿರೆ ನಮ್ಮ ಬದುಕಿನ ಹಸರ
ಬಾನಿಗೆತ್ತುವ ಜಾಣರಾಶಿಯೇನೆ? ೪

*　　　*　　　*

ಕಣ್ಣು ತೆರೆ, ಕಣ್ಣು ತೆರೆ, ಕಣ್ಣು ತೆರೆ ಜೊತೆಗಾತಿ!
ಕಣ್ಣುಗಳ ಮುಗಿದು ಬಾಳುವುದಿದೆಲ್ಲಿಯ ರೀತಿ?

# ನಡೆ, ಸಾಗು ಜೊತೆಗೂಡಿ!

ಪಲ್ಲವಿ—

ನಡೆ, ಸಾಗು ಜೊತೆಗೂಡಿ, ನಾಚಿಕೆ ಸಾಕೆ!
ಕೊಡು ಕೈಗೆ ಕೈ ನಲ್ಲೆ, ಹೆದರಿಕೆಯೇಕೆ?

೧

ಒಡನಾಡಿಯೆಂದೊಪ್ಪಿಕೊಂಡ ನೀತಿಯೆ ನಿನ್ನ
ಕೆಡಹಿದೆ ಕೈ-ಕಾಲ ಬಿಗಿದು—
ನುಡಿದಂತೆ ನಡೆಯದ ನೀತಿಯ ನಂಜನು
ಕುಡಿವುದಿನ್ನೇಕೆಲ್ಲಾ ತಿಳಿದು?

೨

ಬಾಳಿನ ದಾರಿಗೆ ಬೇಲಿ ಸಾಸಿರವೆಂಬ
ಗೋಳನು ಬಲ್ಲ ಹಿರಿಯರೇ—
ಬಾಳಗೆಲ್ಲಲು ಹೇಳ-ಹೇಳುತ ಹಲವು ಸಂ-
ಕೋಲೆಯ ನಿನಗಿಕ್ಕಿರುವರೆ!

೩

ನಾನುಳಿದಿರೆ ನಿನ್ನ, ನೀನಗಲಿರೆ ನನ್ನ,
ಈ ನುಡಿ ದಿಟ; ಆದರೇನು?
ನಾ ನಡೆದಿಹ ಗುರಿ ಹಾರಿಹೋಗುವ ದಾರಿ;
ಬರುವುದದೆಂತಲ್ಲಿ ನೀನು?

೪

ಕೊರಗಿನ ಬಿರುನೋಟ ಬಿಡು, ನಿನ್ನ ಸಂಕೋಲೆ
ಮುರಿದು ಚೆಲ್ಲುವೆನಿಂದು ನಲ್ಲೆ,
ಗರಿಗಿಂತ ಹಗುರಾಗಿ ನೀ ನನ್ನ ಜೊತೆ ಯಾರ
ನೆರವಿಲ್ಲದೆಯೆ ಹಾರಬಲ್ಲೆ !

೫

ಸಂದಿತು ಕಾರ್ಮೋಡಗಳ ಕತ್ತಲಿರುಳೀಗ
ಬಂದಿದೆ ಬೆಳಕಿನ ಹೊಸಲು;
ತಿಂದ ನಂಜಿನ ಕಾಹ ಕರಗಿಸ ಬಲ್ಲದು—
ಇಂದಿನೀ ಹೊಸಬಾಳ ಹಗಲು !

* * *

ನಡೆ ಮುಂದೆ ಜೊತೆಗೂಡಿ, ನಾಚುವುದೇಕೆ ?
ಕೊಡು ಕೈಗೆ ಕೈ ನಲ್ಲೆ, ಹೆದರಿಕೆ ಸಾಕೆ !



# ನಾಗಪಂಚಮಿ

ನಾಗಪಂಚಮಿ ಬಂದಿಹುದೆ ಸಖಿ,
ನಾಗಪೂಜೆಯು ಗೈವೆಯೆ ?
ತೂಗುವುಯ್ಯಾಲೆಯಲ್ಲಿ ಕುಳಿತು-
ಯ್ಯಾಲೆಯಾಡುವೆನೆಂಬೆಯೆ ?
ಕೊಳು-ಕೊಳೆಂದೊರಲಿ ಮೊರೆಯುತ
ಗೋಳಿಡುವ ನಾಡಿಗರ ಹಸಿವೆಯು
ಕಾಳನಾಗಗಳಿಂದು ಸಂಜಿನ
ನೀಳ ನಾಲಗೆಯೆತ್ತಿ ನಿಂತಿವೆ—
ನೀಳನಾಲಗೆಯೆತ್ತಿ....!
ಅಲ್ಲಿ ನೀನೆರೆ ಹಾಲು....
ಅಲ್ಲಿ ಹಾಲೆರೆದವನು ತಣಿಸಲು
ನಲ್ಲೆ, ನಮಗಿದೆ ಬಾಳು ! ೧

ಹಿಂದು-ಮುಂದಕೆ ವ್ಯೆಯ ತೂಗುತ
ಸಿಂದಡೆಯೊಳೇ ನಿಲಿಸುತಿರುವೀ
ತೂಗುಮಣೆ-ಉಯ್ಯಾಲೆಯಿಂದೇ-
ನಾಗಬಹುದುಪಯೋಗ, ನಮಗೇ-
ನಾಗಬಹುದುಪಯೋಗ ?
ತೂಗಿಕೊಳುತೆಯೆ ಮುಂದೆ....
ತೂಗಿ ಕೊಳುತೆಯೆ ಮುಂಬರಿವ ಹೊಸ-
ತೂಗುಮಣೆ ಬೇಕಿಂದೆ ! ೨

*  *  *

ತೂಗುವುಯ್ಯಾಲೆಯಾಡುತಾಡುತ
ಹಬ್ಬ ಮಾಡುವೆನೆಂಬೆ;
ಹೀಗೆಯೇ ಜೋಲಾಡುತಿದ್ದರೆ
ಯಾವ ಸುಖ ನೀ ಕಾಂಬೆ—ನಲ್ಲೇ—
ಯಾವ ಸುಖವನು ಕಾಂಬೆ ?

---

# ಜೀವ ದೀವಳಿಗೆಗಾರಯ್ಯುತಿದೆಯೆ !

*　　　*

ಜೀವ ದೀವಳಿಗೆಗಾರಯ್ಯುತಿಹುದೇ—ದೇವಿ,
ಕಾರ್ಯ ಕಾವಳದತ್ತ ತುಯ್ಯುತಿಹುದೆ !
ಭಾವ ತೂಗುಯ್ಯಾಲೆಯು ನೇರಿಸಿಹುದೇ—ನಮ್ಮ
ಜೀವದಾಶೆಯು ನೆಂತು ಪೂರಿಸುವುದೆ ?

*　　　*

ಬೆಳುಗಾಲ ಬಾನೊಳಗೆ ಬಿಳಿಮುಗಿಲ ಕೂಟ,
ಹೊಲ-ಹೊಲದೊಳೆಲ್ಲಿಯೂ ಬೆಳೆಯ ಚೆಲ್ಲಾಟ;
ಹೊಸ ಮೇವು-ಬೆಳಸಿ ಹಸು-ಹಕ್ಕಿಗಳಿಗೂಟ,
ಕಸದಿ ರಸ ತುಂಬುವುದು ದೀವಳಿಗೆಯಾಟ !
ಆದರೇನಿದು ನೋಟ ?
ಮಳೆಗಾಲ ಕಳೆದರೂ ಇಳೆ ಬರಿದು ಬರಿದೆ,
ಬಿತ್ತಿದರೆ ಬರಿ ಮಣ್ಣು-ಕಲ್ಲೆ ಬೆಳೆತಹುದೆ ?
ಹಸಿ-ಹಸಿದು ಹಲಬುತಿದೆ ಜೀವಕುಲವು;
ಇದು ನಮ್ಮ ನಿಷ್ಕರ್ಮ ಬೆಳೆದ ಫಲವು !

*　　　*

ಮೂಲೆಯೊಳೆ ಬಿದ್ದು ಮಣ್ಣಿಡಿದ ಪ್ರಣತಿ
ತಾಳಿ ಸಂಸ್ಕಾರ ಹೊಂದುವುವು ಕಾಂತಿ;
ಸಾಲಾಗಿ ಬೆಳಗಿ ಪ್ರಜ್ವಲಿತ ಜ್ಯೋತಿ—
ಕಾಳಿಮವ ಕಳೆವುದೀ ದಿನದ ಖ್ಯಾತಿ !
ಆದರೇನಿದು ರೀತಿ ?
ಪ್ರಣತಿಗಳಸಿದುವರೆಗು ಯಾರು ತೊಳೆದಿಲ್ಲ;
ಎಣ್ಣೆ-ಎಳೆಬತ್ತಿಗಳನಣಿಗೊಳಿಸೆ ಇಲ್ಲ !
ಸಾಲು ದೀಪಕೆ ಸಲುವ ಅಟ್ಟಳಿಗೆಯಿಲ್ಲ,
ದೀವಿಗೆಯ ನಂಟಿಸುವುದೇತರಿಂದೆಲ್ಲ ? .... ಆದರೂ....
ಜೀವ ದೀವಳಿಗೆಗಾರಯ್ಯುತಿದೆಯೆ—ಚೆನ್ನೆ—
ಬಯಕೆ ಹಣ್ಣಾಗದಿರದೆನ್ನುತಿದೆಯೆ !

---

# ಅದುವೆ ದಿಟ ದೀಪಾವಳಿ!

ಪಲ್ಲವಿ—

ಉಲ್ಲಸದ ನಗೆಯುರಳಿಹುದೆ ಸಖಿ,
ಎಲ್ಲಿಹುದೆ ದೀಪಾವಳಿ?
ಎಲ್ಲಿ ನೋಡಿದರೆಲ್ಲ ಕಡೆ ಬರಿ
ಕಳ್ತಲೆಯದೇ ಹಾವಳಿ!

೧

ಮುಂದಿನಾ ಬಾಗಿಲೊಳು ಒಂದೇ–
ಒಂದು ದೀವಿಗೆ ಮಿಣುಮಿಣಿಸುತಿದೆ;
ಒಂದೆ ಸಲ ಮೆಲುಗಾಳಿ ಸುಳಿದರೆ
ನಂದಿ ಹೋಗುವ ದಾರಿಯಲ್ಲಿದೆ;
ಏಕೆ ಬಡತನ ನಲ್ಲೆ?....
ಏಕೆ ಬಡತನ? ಮನೆಯೊಳೇ ಚಿರ-
ದೀಪ ಸಾಧನವಿಲ್ಲೇ?

೨

ಮನೆಯೊಳಿರಿಸಿಹೆ ಹಲವು ಹಣತೆಯ;
ಹನಿ-ಹನಿಯು ಸ್ನೇಹವನು ಕಾಣದೆ
ತಿನುತಲಿವೆ ಬರಿಬತ್ತಿಯನೆ; ನೀ-
ನೆಸುವೆ: 'ದೀಪಾವಳಿಯ ಮಾಡಿಹೆ!'
ಕಂಗುರುಡು ನಿನಗೇನೇ?....
ತುಂಬಿರಲು ಪಾತ್ರೆಯೊಳು ಸ್ನೇಹವು
ಎರೆಯದೇಕಿಹೆ ಜಾಣೆ?

೩

ಹಾರಿದರೆ ಹುಳು ಆರಿಹೋಗುವ
ಆರತಿಯ ಬೆಳಗಲಿಕೆ ತಂದಿಹೆ;
ಆರಪಾರತಿ ಬಳಿಯಲಿರ್ದ್ದರು
ನೀರೆ, ಅದನರಿಯದೆಯೆ ನಿಂದಿಹೆ;
    ಬೆಳಗು ಆ ಪ್ರಭೆಯಾರತಿ....
ಬೆಳಗಿದರೆ ಮುಡಿಪೀವೆ ನನ್ನೆದೆ-
    ಯೊಳಗನೇ ನಲ್ಮೂರುತಿ !

೪

ಉಲ್ಲಸದಿ ಮೊಗವರಳಿಸಿಹೆ, ಸಖಿ,
    ಎಲ್ಲಿದೆಯೆ ದೀಪಾವಳಿ ?
ಎಲ್ಲಿ ನೋಡಿದರಲ್ಲಿ ಬೇಕೆಲಿ
    ಹಗಲು ಪಂಜಿನ ಗಾವಳಿ !
    ಅದುವೆ ದಿಟ ದೀಪಾವಳಿ....!
ಅದುವೆ ದಿಟ ದೀಪಾವಳಿಯೆ ಸಖಿ,
    ಬದುಕಿಗೊಸಗೆಯ ಓಕುಳಿ !



# ನಿಟ್ಟುಸಿರು

೧

ಚಿಂತೆಯು ಮುಡಿದಿಹ ವಿಧವಿಧ ಸುಮಗಳ
ಸಂತೆಯೊಳೆಲ್ಲಿಯು ಸುಳಿ-ಸುಳಿದು,
ಎಂತಹದೋ ಹೊಸ ಕಂಪನು ಹರಡುತ
ಬಂತೈ ಗಾಳಿಯ ತೆರೆಯೊಂದು;
ಅದಕೆಂದಿತು ಜನ 'ನಿಟ್ಟುಸಿರು!'
ಶಾಂತಿಯ ಮೊಳೆಗಾಯ್ತದು ಕಸುರು!

೨

ಕಡಲಿನ ಕಡೆಹದ ಸಮಯದಿ ಹಾವುಗ-
ಳೊಡೆಯನು ವಾಸುಕಿ ಬಲುನೊಂದು,
ಬಿಡದೆ ಫೂತ್ಕರಿಸೆ ಆದನಾಶಾವಧು
ಹಿಡಿದು ಕೊಳಲ ಮಾಡಿದಳಂದು;
ಆ ಕೊಳಲುಲಿಯೇ 'ನಿಟ್ಟುಸಿರು!'
ನಲವಿನ ಬೆಳೆಗೆರೆವುದು ಎಸರು!

೩

ಹಸಿವೆಯ ರಾಣಿಯು ಹಗೆಗಳ ಗೆಲ್ಲುತ
ವಶಗೊಳ್ಳುತ ದಶದಿಶೆಗಳನು,
ಜಸವರೆ ಬಾಜಿಸಿ ಬಿನದಿಸುತಿರುವಳು
ಪಸರಿಸಿ ನಗೆ-ಬೆಳುದಿಂಗಳನು;
ಹಸಿವೆಯ ನಗೆಯಿದು ನಿಟ್ಟುಸಿರು,
ಬಾಳಿನ ಬೇಹಾರದ ಕೊಸರು!

೪

ಕಳವಳಗಪ್ಪಿಗ ಕರುಣಾರಸವದೆ
ತುಳುಕುವ ಕವಸವ ಒರೆದಿರುವ;
ತಿಳಿದವರೆಂಬರ ತಿಳಿಯದರೆಂಬರ
ಹೃದಯವ ಹಿಡಿದಲುಗಾಡಿಸುವ;
ಆ ಕವನಕೆ ಹೊಸ ಹೊಸ ಕುಸುರು,
ಹಾಕಿದೆ ಇದೆ ಈ ನಿಟ್ಟುಸಿರು!

೫

ಅನ್ನಬ್ರಹ್ಮವ ಮೆಚ್ಚಿಸಿಕೊಳ್ಳುವೆ-
ವೆನ್ನುತ ಜೀವರ ಬಳಗವಿದು—
ಬಿನ್ನಾಣದ ಮಂತ್ರಗಳಲಿ ಪೂಜಿಸಿ
ತನ್ನಯ ಮೈ ಸವೆಯಿಸುತಿಹುದು;
ಪೂಜೆಯ ಮಂತ್ರದ ಕೊನೆಯುಸಿರು,
ಸಾಜವು ಅಹುದಿದೆ ನಿಟ್ಟುಸಿರು!



# ಬಿಸಿಲು-ನೆಳಲು

೧

ಇತ್ತ ಬಯಲಲಿ ಬಿಸಿಲ ಬೇಗೆ ಹರಡಿಹುದೆ,
ಅತ್ತ ಬನದಲಿ ತಂಪು ನೆಳಲು ತುಂಬಿಹುದೆ!
ಬಯಲಲ್ಲಿ ತಿರುಗುವಗೆ ಬರಿಯೆ ಬಿಸಿಲ ಧಗೆ,
ಬನವರಿತು ತೆರಳ್ದವಗೆ ಬಾಳೆಲ್ಲ ಸೊಬಗೆ!

೨

ಎಲ್ಲಸ್ಮು ಜೀವಜಂಗುಳಿಯ ತಂ-ತಂಡು—
ಚೆಲ್ಲುವಳು ಬಯಲಿನಲಿ ತನ್ನಾಟಕೆಂದು;
ಬಯಲೆ ಇಡಿಯಿಳೆಯೆಂದು ಜೀವಗಳು ಹಲವು
ಬಿಸಿಲಲಿಯೆ ಅಲೆದಾಡಿ ಬಳ-ಬಳಲುತಿಹವು!

೩

ಬಿಸಿಲ ಗುಣವೆರಡಲೇ.... ಬಿಸುಪು-ಬೆಳಕುಗಳು?
ಅವೊಡೇನಚ್ಚರಿಯದಿದು ಬಯಲ ಬಿಸಿಲು!
ಬಿಸುಪುಂಟು ಬೆಳಕಿಲ್ಲ, ಎಲ್ಲಿಯೂ ಮಂಜು!
ತನ್ನ ಬಳಿ ಬಂದವರಿಗೆರೆವುದಿದು ನಂಜು!

೪

ಮಂಜು-ನಂಜುಗಳಿಂಗೆ ಅಂಜಿದಾ ಜೀವ
ಪೊಂದುವುದು ಬಿದ್ದಲಿಯೆ ಬಿದ್ದು ಬರಿ ನೋವ!
ಅಂಜದೆಯೆ ಅತ್ತಿತ್ತ ಓಡಾಡುತಿರುವ
ಜೀವಂಜೀವ ಸಾರುವುದು ಬಾಳಿನಾ ಬನವ!

೫

ನೆಳಲಿಹುದು, ಆದರೇನಲ್ಲಿ ಮುಸುಕಿರದು;
ಬೆಳಕಿಹುದು, ಆದರೇನಲ್ಲಿ ಬಿಸುಪಿರದು;
ಅಲ್ಲಿ ಬಯಲಲಿ ಉಂಡ ಅಳಲು ಹೊಳೆಯುತ್ತಿದೆ,
ಅಲ್ಲಿ ಬನದಲಿ ಉಣುವ ಸೊಗಸು ತಿಳಿಯುತ್ತಿದೆ!

೬

ಇಲ್ಲಿ ಬಯಲಲಿ ಬಿಸಿಲ ಬೇಗೆ ಹರಡಿಹುದೆ,
ಅಲ್ಲಿ ಬನದಲಿ ತಂಪು ನೆಳಲು ತುಂಬಿಹುದೆ;
ಬಯಲೆಂಬುದೇನು ಅದು ಹಣ ಮರಳ ಬಯಲು,
ಬನವೆ ಚೆಂದಳಿರು—ತನಿವಣ್ಣು—ಕಮ್ಮರಲು!

---

# ಒಲವಿನ ಕನಸು

೧

ಒಲವಿನ ಕನಸು—ಕವಿದಿರೆ ಮನಸು
ಬಡಿದಂತೆ ಗರ—ಬುಡುಬುಡುಕೆ ತೆರ
ಬಡಬಡಿಸುವುದು;—ಕಂಗಳ ತೆರೆದು
ನಿರುಕಿಸಿದರದು—ಬರಿದೋ ಬರಿದು!

೨

ಮಲಗಿನ ಕನಸದು—ಒಬ್ಬಗೆ ತಿಳಿವುದು;
ಒಲವಿನ ಕನಸನು—ಲೋಕವೆ ಅರಿವುದು;
ಒಯುಲಿಗೆ ಬಗೆ-ಬಾಯ್ ಬಿಟ್ಟದುದಕ್ಕೆ
ಗುರಿಯಾಗುವನವ—ನಗೆಯಾಟಕ್ಕೆ!

---

# ಬಂತು ಬಂತು ಮಾಗಿ!

ಬಂತು ಬಂತು ಮಾಗಿ—ಭಾಮೆ
ಸಹಜ ಕರ್ಮಯೋಗಿ!
ಬಂತು ಬಂತು ಮಾಗಿ—ಪ್ರಕೃತಿ-
ಧರ್ಮಕೆ ತಲೆವಾಗಿ!

೧

ಪಡುವ್ರಗಾಳಿಯೋಡೆ, ಮೂಡುಗಾಳಿ ತೀಡೆ;
ಒಕ್ಕಲಿಗರ ಬಕ್ಕ ಬಯಲ
ಮನೆಯ ಭಾಗ್ಯವಾಗಿ, ಬಂತು ಸಾಗಿ ಮಾಗಿ!
ಬಂತು ಬಂತು ಮಾಗಿ—ಭಾಮೆ,
ಸಹಜ ಕರ್ಮಯೋಗಿ!

೨

ಮಾಗಿ ಸಾಗಿ ಬಂದಿತು, ಕುಳಿರ ಕೆಳೆಯನೊಂದಿತು!
ಬೆಳೆಯು ಬಾಳ ಕಸುಕುತನದ
ಕನರ ಕಹಿಯು ಕೊಂದಿತು, ಹಣ್ಣು ಹದಕೆ ತಂದಿತು!
ಬಂತು ಬಂತು ಮಾಗಿ–ಭಾಮೆ
ಸಹಜ ಕರ್ಮಯೋಗಿ!

೩

ಇರುಳ ನೀಲಿ ಬಾನು, ಬೆಳುದಿಂಗಳ ಜೇನು!
ಹೊಸತಿಲ ಹುಣ್ಣಿಮೆಯ ನಗೆಯು
ಉಸಿರುಸಿರಿಗು ಪೇರುತ, ಒಸಗೆಗಳನು ತೂರುತ—
ಬಂತು ಬಂತು ಮಾಗಿ—ಭಾಮೆ,
ಸಹಜ ಕರ್ಮಯೋಗಿ!

೪

ಮುಗಿಯೆ ಬೆಳೆಯ ಬಾಳು, ಒಗೆಯೆ ತಿರೆಗೆ ಗೋಳು;
ಬೀಜಗಳಲಿ ನವಸೃಷ್ಟಿಯು
ತುಂಬಿ ಇರಿಸಲೆಂದೇ, ಬರಲಿಹ ಬೆಳೆಗೆಂದೇ—
ಬಂತು ಬಂತು ಮಾಗಿ—ಭಾವೆ,
ಸಹಜ ಕರ್ಮಯೋಗಿ !

೫

ಎಲ್ಲೆಲ್ಲಿಯು ಅನ್ನ, ತೀವಿ ಕಳೆಯ ಬನ್ನ—
ಜೀವಕುಲದ ಬಯಕೆಗೆಲ್ಲ
ನಾಳೆಯೂಟ ಒದವಿಸಿ,....ಕೂಡಲು ಬಂತು ಧಾವಿಸಿ !
ಬಂತು ಬಂತು ಮಾಗಿ—ಭಾವೆ,
ಸಹಜ ಕರ್ಮಯೋಗಿ !



# ನೋಡು ಬರುವ ಸುಗ್ಗಿಯಾಟ!

೧

ಬಾಳಿದು ಕನಸಲ್ಲ, ಗೋಳಿನ ತಿನಿಸಲ್ಲ,
ನನ್ನಿ-ಹಿಗ್ಗಿನ ಹೊಸ ತೋಟ!
ನಾನೊಂದು ಮಾಮರ, ನೀ ಮಲ್ಲಿಗೆಯ ಬಳ್ಳಿ;
ಚೆನ್ನೇ ಚೆನ್ನೆನಿತು ಈ ಕೂಟ....?

೨

ಮಾಗಿಯ ಕೊರೆತಕೆ ಮೈ ಬರಲಾಗಿರೆ
ಮರ-ಬಳ್ಳಿ ಮರುಗಿ ಸಾಯುವುವೆ?
ಸಾಗಿಬಹುದು ಸುಗ್ಗಿಯೆಂಬ ನಲವಿನಲಿ
ಕಾಲವ ತುಳಿದು ಬಾಳುವುವೆ!

೩

ಹದ್ದು-ಹಾಲಕ್ಕಿಯು ಹಾರಾಡುತಿಹವೇನೆ?
ಕೂಗುತಿಹವೆ ಕಾಗೆ-ಗೂಗೆ?
ಹೆದರಿಕೆ ಬಿಡುಬಿಡು, ಅವುಗಳಾಟವ ನೋಡು,
ಹುದುಗಿಹುದಲ್ಲಿಯು ಸೊಬಗೆ!

೪

ಬಾಳಿನ ತೋಟಕೆ ಬರಲಿದೆ ಹೊಸ ಸುಗ್ಗಿ
ನಳನಳಿಸುವುದಂದು ತಳಿತು;
ಹಣ್ಣು ಬಿಡುವೆ ನಾನು, ಹೂವ ಹೊರುವೆ ನೀನು,
ದಿಟ ದಿಟ ನಂಬು ಈ ಮಾತು!

೫

ಹಣ್ಣಗೊನೆಯ ಹೊತ್ತು ಜೀವ ಜಂಗುಳಿಗಿತ್ತು
ಹಸಿವಿನುರಿಯ ನಾ ಹಿಂಗಿಸುವೆ;
ಹೂವಿನ ಹುರುಳಿಂದೆ ಹೃದಯವನರಳಿಸಿ,
ರಸಿಕಕುಲವ ನೀ ರಂಗಿಸುವೆ!

೬

ಕಳಿವಣ್ಣುಗಳನುಂಡು ಕೋಗಿಲೆ-ಗಿಳಿವಿಂಡು
ಕಲಕಲ ನುಡಿಯನಾಡುವುವೆ!
ಹೂವಿನ್ನೈಸಿರಿ ಕಂಡು ಮರಿದುಂಬಿಗಳ ದಂಡು
ಇನಿದನಿವೆರಸಿ ಹಾಡುವುವೆ!

೭

ಬಾಳಿದು ಕನಸಲ್ಲ, ಗೋಳಿನ ತಿನಿಸಲ್ಲ,
ನನ್ನಿ-ಹಿಗ್ಗಿನ ಹೊಸ ತೋಟ;
ನಾನೊಂದು ಮಾಮರ, ನೀ ಮಲ್ಲಿಗೆಯ ಬಳ್ಳಿ,
ನೋಡು ಬರುವ ಸುಗ್ಗಿಯಾಟ!



# ಕುರಿಮರಿಯಾಟ

ಪಲ್ಲವಿ—

ಕುರಿಯ ಮರಿ ಬೇಕೇನು, ಕುರಿಯ ಮರಿ ಬೇಕೇನು ?
ಕಿರಿಯದಾಗರು ಮಾಡುವುದು ಹಲವು ಕೆಲಸವನು !

೧

ಮನೆಯಲಿಹ ಹೊನ್ನು-ಹಣ ಬೀದಿಗೆ ಬಿಸಾಡುವುದು,
ತಿನಲಿರುವ ತಿಂಡಿಯಲಿ ಹುಡಿ-ಮಣ್ಣ ಹಾಕುವುದು ;
ಹೊರಗಿರುವ ಹುಲ್ಲು-ಕಸ ಒಳಗೆ ತುಂಬುವುದು—
ಉರಿಯನಂಟಿಸುತದಕೆ ಕೂಗಿ ಕುಣಿಯುವುದು !

೨

ಬಂದವರ ಮೈಗೆಲ್ಲ ಬೂದಿಯನು ಚೋಳಿಯುವುದು,
ನಿಂದು ನಗುವರ ಬಾಯ್ಗೆ ಬಲವಾಗಿ ಬಡಿಯುವುದು ;
ಅಳುತಿರುವ ಎಳೆಯರನು ಬಳಿಗೆ ಕರೆಯುವುದು,
ಬಳಿಗೆ ಬರೆ ತನ್ನಂತೆ ಕುಣಿಯೆ ಕಲಿಸುವುದು !

೩

ಮಾವಿನದು ಸವಿಹಣ್ಣ ಬೇವಾಗಿ ಮಾಡುವುದು,
ಬೇವಿನಾ ಕಸುಗಾಯ್ಗೆ ಬಾಯಬಿಡಹಚ್ಚುವುದು ;
ಇಲ್ಲದಿಹ ಅಳಲುಗಳ ಎದುರಿಗಿರಿಸುವುದು—
ಸಲ್ಲದಾ ನೋವುಗಳನುಂಟು ಮಾಡುವುದು !

೪

ಸಿಕ್ಕಿರುವ ಒಡವೆಗಳನಿಕ್ಕಿಸುವುದಿದು ಹೊಳೆಗೆ,
ಸಿಕ್ಕದಿರುವಾವುದಕೊ ಬಿಕ್ಕಿ ಅಳಿಸುವುದು;
ಬಲ್ಲ-ಬಲ್ಲವರನೂ ಬಲುಹುಚ್ಚರನು ಮಾಡಿ
ಎಲ್ಲೆಲ್ಲಿಯೂ ಬರಿದೆ ಅಲೆದಾಡಿಸುವುದು !

೫

ಸಾಸಿರದ ಬೆಲೆಯೊಡವೆ ಕಾಸಿನದು ಎನಿಸುವುದು,
ಕಾಸಿನೊಡವೆಗೆ ನೂರು ಸಾಸಿರವ ಕೊಡಿಸುವುದು;
ಇದಕೆ ಬೆಲೆ ಕೊಡುವವರು ಇಲ್ಲವಿಳೆಯಲ್ಲಿ,
ಅದಕೆಂದೆ ಬೆಲೆಯಿಲ್ಲದೆಯೆ ಕೊಡುವೆ ಕೊಳ್ಳಿ !

* * *

ಕುರಿಯು ಮರಿ ಬೇಕೇನು, ಕುರಿಯು ಮರಿ ಬೇಕೇನು ?
ಕಿರಿಯುದಾದರು ಮಾಡುವುದು ತುಂಬ ಕೆಲಸವನು !



# ಜಯ ಜಯ ಜಯ ಫಾಲ್ಗುಣ!

೧

ಜಯ ಜಯ ಜಯ ಫಾಲ್ಗುಣ!
    ಜಯೋತ್ಸಾಹ ಕಾರಣ!
ನವಯುಗದಾಗಮನವರಿತು
    ನಿಲಿಸುವೆ ನೀ ತೋರಣ!

೨

ತಿಳಿಯ ನೀಲಿಯಾಗಸದಲಿ
    ಬೆಳಗುವನದೊ ಭಾಸ್ಕರ;
ಚಳಿ-ಬಿಸಿಲೊಳು ಕೆಳೆ ಬೆಳೆಯಲು
    ಇಳೆ ಸೊಗಸಿಂಗಾಕರ!

೩

ಮರ್ದ್ದನೇನು ಕೊಟ್ಟೆ ನೀನು
    ತುಂಬುದಿಂಗಳಣ್ಣಗೆ?
ಎಲ್ಲ ಕಾಲದಂತೆ ಇಲ್ಲ,
    ಏನು ಹಿಗ್ಗೊ ಅವನಿಗೆ?

೪

ಬೆಳುದಿಂಗಳ ಸುಧೆಯುಂಗಳ
    ತುಂಬಿ ಸೂಸಿ ಹರಿವುದು!
'ಸಾಕು ಬದುಕು' ಎಂಬ ಕಸುಕು-
    ಮನ ಜೀವನ ಕರೆವುದು!

೫

ನಿನ್ನ ಇರುಳು ಜನವ ಮರುಳು-
ಮಾಡುತಿರುವುದೇಕೆ?
ಹೆಣ್ಣು-ಗಂಡುಗಳನು ಕಂಡು
ಹೇಳುವೆ ನೀ ಜೋಕೆ!

೬

ಎಳೆಯ ಮಾವುಮಿಡಿಯ ಕಸರ
ಕಳೆಯುವವನು ನೀನೆ!
ಹುಳಿಯುನೆರೆದು ಹಣ್ಣಿಗೆ ಹದ-
ಗೊಳಿಸುವವನು ನೀನೆ!

೭

ತಳಿತ ಬನದ ಚೆಲುವ ತಳೆದ
ಸುಗ್ಗಿಗೇಕೊ ಹೆಮ್ಮೆ!
ತಳಿರಿಡಿಯಲು ಒನ-ಬನಗಳು
ಬೇಕು ನಿನ್ನ ಗೆಯ್ಮೆ!

೮

ಹೊಸ ಹರಯಕೆ ಕುಸುರುಗೊಡುವ
ನನೆಯಬಿಲ್ಲನಣ್ಣ!
ಹೊಸ ವರುಷಕೆ ಬಸಿರಸಿತ್ತು
ನಿ ಮುಚ್ಚುವೆ ಕಣ್ಣ!

* *

ಜಯ ಜಯ ಜಯ, ಫಾಲ್ಗುಣ!
ಜಯೋತ್ಸಾಹ ಕಾರಣ!
ನವಯುಗದಾಗಮನವರಿತು
ನಿಲಿಸುವೆ ಗುಡಿ-ತೋರಣ!

---

# ಹೊಸ ಕಾಲದ ಹಿರಿನೆರೆ

೧

ಹೊಸ ಕಾಲದ ಹಿರಿನೆರೆಯಿದು ಮುಗುದೆ,
ಕಸರು ಕೆಸರು—ಸರಿ—ನೀರ ಕದಡಿದೆ;
ಹೊಸ ನೀರಿನ ಗುಣವರಿಯದೆ ಬರಿದೆ—
ಕಸುವನೆ ಕಂಡಿನಿತೊಂದು ಬೆದರಿದೆ.... ?

೨

ಅಂದಿನ ಹೊಳೆಯನು ನೋಡಿರಲಿಲ್ಲೇ ?
ಅಂದ-ಚೆಂದವೇನಿದ್ದಿತು.... ಬಲ್ಲೆ !
ನಿಂದ ನೀರು ಕೊಳೆಗೊಂಡು ಹರೆಗಡಿದು
ಹಂದಿಗಳಾಟಕೆ ಹದನಿದ್ದಿತಲೆ ?

೩

ಕಾರ ಮುಗಿಲು ಗುಡಗುಡನೆ ಗುಡುಗಿತು,
ಕೋರೆ ಮಿಂಚು ಥಳಿರೆಂದು ಚಿಗಿಯಿತು,
ತೋರ ಮಳೆಯು ಹೊಸ ನೀರ ಕರೆಯಿತೇ—
ಸಾರಿ ಬಂದದುವೆ ತೊರೆಗೆ ಬೆರೆಯಿತೆ !

೪

ಎಸಿತೆಸಿತಿದು ಇಂದಿನ ತೊರೆಯುಬ್ಬರ,
ಮುನಿದ ಮನದೊಲಿದೆ ಹೊಸ ನೀರಬ್ಬರ;
ಒಳಿಗೆ ಬಂದುದನು ಒಳಗೆಳೆಯುತಿದೆ,
ಅದಕೆಂದೇ ಕಸ-ಕೆಸರು ಕಲೆತಿದೆ !

# ಮೊದಲ ಮಾತು

ಹತ್ತುವರ್ಷಗಳ ಹಿಂದೆಯೆ ಈ ಕವನಸಂಗ್ರಹ ಪ್ರಕಟವಾಗಬೇಕಾದುದು. ೧೯೩೫ನೆಯ ಇಸ್ವಿಯಲ್ಲಿ ಪ್ರಕಟವಾದ 'ವಿರಹಿಣಿ' ಎಂಬ ನನ್ನ ಕವನಸಂಗ್ರಹದಲ್ಲಿ, ಈ 'ಒಡನಾಡಿ' ಅಚ್ಚಿಗೆ ಸಿದ್ಧವಿದ್ದುದು ಸೂಚಿತವಾಗಿದೆ; ಆದರೆ—ಕಾರಣವಿದ್ದೊ ಇಲ್ಲದೆಯೊ—ಅದು ಅಚ್ಚಾಗಿ ಹೊರಬರಲು ಹತ್ತುವರ್ಷದ ವಿಲಂಬವಾದುದನ್ನು ನೋಡಿ ಯಾರೂ ಆಶ್ಚರ್ಯ ಪಡುವಂತಿದೆ. ಹೀಗೆ ವಿಲಂಬವಾದುದು ಒಂದು ರೀತಿಯಿಂದ ಅನುಕೂಲವಾಯಿತೆಂದು ನನ್ನ ಎಣಿಕೆ. ಏಕೆಂದರೆ ೧೯೩೫ರಿಂದ ಮುಂದೆ ರಚಿತವಾದ ಕೆಲವು ಕವನಗಳನ್ನೂ ಇದರಲ್ಲಿ ಸೇರಿಸಲಿಕ್ಕೆ ಅವಕಾಶ ದೊರೆಯಿತು. ೧೯೨೬ರಿಂದ ಇದುವರೆಗಿನ ನನ್ನ ಜೀವನದಲ್ಲಿ—ಸಂದರ್ಭವಶವಾಗಿ—ಆಗಾಗ ರೂಪುಗೊಂಡ ಭಾವಗೀತ-ಭಾವಕವನಗಳೆಲ್ಲ ಇದರಲ್ಲಿ ಬಂದಿವೆ. ಮುಂಬರಯದ ಮುಗ್ಧ ಪ್ರಣಯದ ಆತುರ-ಕಾತರಗಳನ್ನೂ ಏರುವರಯದ ಕಾಮಪ್ರಣಯದ ರತಿ-ಹಾಸಗಳನ್ನೂ, ತುಂಬುವರಯದ ಅನುಭವಪ್ರಣಯದ ಸುಖ-ದುಃಖಗಳ ಉಯ್ಯಾಲೆಯಾಟವನ್ನೂ, ಇಳಿವರಯದ ಪರಿಪಕ್ವಪ್ರಣಯದ ತತ್ತ್ವಜ್ಞತೆಯನ್ನೂ ಇಲ್ಲಿಯ ಕೃತಿಗಳಲ್ಲಿ ನೋಡಬಹುದು.

ಇದಕ್ಕೆ ಮೊದಲು ಪ್ರಕಟವಾದ ನನ್ನ ಕವನಸಂಗ್ರಹಗಳು ಮೂರು. 'ಮುದ್ದನ ಮಾತು' 'ಅರುಣೋದಯ' 'ವಿರಹಿಣಿ'. ಒಂದೊಂದರಲ್ಲಿಯೂ ಒಂದೊಂದು ಸ್ಥಾಯಿಭಾವವನ್ನು ಅವಲಂಬಿಸಿ ಹೊರಟ ಕವನಗಳು ಸಂಗ್ರಹಗೊಂಡಿವೆ. ಅದರಂತೆಯೆ ಇದರಲ್ಲಿ ಕೂಡ ಗಂಡು-ಹೆಣ್ಣಿನ ರತಿಯನ್ನವಲಂಬಿಸಿ ಹೊರಟ ಕವನ-ಗೀತಗಳಷ್ಟೆ ಸಂಗ್ರಹಗೊಂಡಿವೆ. ವಿವಿಧಭಾವದ ಕವನಗಳಿಂದ ಕೂಡಿದ ಇನ್ನೊಂದು ಸಂಗ್ರಹವನ್ನು '**ಕಾರಹುಣ್ಣಿವೆ**' ಎಂಬ ಹೆಸರಿನಿಂದ ಪ್ರಕಟಿಸಬೇಕೆಂದು ಆಶೆಯಿಟ್ಟುಕೊಂಡಿದ್ದೇನೆ.

೫

ಕಪಡು ನೀರು ನಿಜ, ಆದರೆ ಏನು,
ಹದನರಿದುಣಿಸಲು ಹೊಲಗಳಿಗಿದನು,
ಒದಗುವುವಲೆ ಕಮ್ಮಲರಿಮ್ಮಾವು ?
ಇದನುಳಿದರೆ ನಿರ್ಭಾಗ್ಯರು ನಾವು !

೬

ಒರಲಿದೆ ಶಾರದ ಸಮಯವು ಮುಂದೆ,
ಸರಿವುದು ತೊರೆಗಳ ಕಸ-ಕೆಸರಂದೆ!
ಎಲ್ಲೆಲ್ಲಿಯು ತಿಳಿನೀರೇ ಕೇಳೆ—
ಅಲ್ಲಿಯುಸಕ ನೀಸಂಜದೆ ತಾಳೆ!

೭

ಹೊಸ ಕಾಲದ ಹಿರಿನೆರೆಯಿದು ಮುಗುದೆ,
ಕಸರು-ಕೆಸರು-ಸರಿ—ನೀರೊಳಪಗಿದೆ !
ಹೊಸ ನೀರಿನ ಗುಣವರಿಯದೆ ಒರಿದೆ—
ದೆಸೆಗೆಟ್ಟವರೊಲು ನೀ ಜೆದರುವುದೆ ?



# ಹೊಸದಿನ

೧

ನಿನ್ನೆಗಳಸು ನೆಲಕೆ ಮೆಟ್ಟಿ
ನಾಳೆಗಳಸು ತಲೆಗೆ ಕಟ್ಟಿ
ಕುಣಿದು ಹಾಡಿ ಕೈಯ ತಟ್ಟಿ
ಬಂದಿತಿಂದು ಹೊಸದಿನ,
ತಂದಿದೆ ಸುಖಜೀವನ!

೨

ಅದೇ ಬಾನು, ಅದೇ ಭಾನು,
ಅದೇ ನಾನು, ಅದೇ ನೀನು,
ಅದೇ ನೆಲ—ಅದೇ ಕೆಲ—
ಆದರು ಇದು ಹೊಸದಿನ
ಇದರ ತಿರುಳೆ ಹೊಸತನ!

೩

ಋತುರಾಜನ ಕೆಳೆಯ ಮಾಡಿ
ಹಳತೆಲ್ಲವ ಹೋಳಿಯಾಡಿ
ಹೊಸ ನಿರ್ಮಿತಿಗೆಡೆಯ ನೀಡಿ—
ನಗುತಿದೆ ಈ ಹೊಸದಿನ!
ನವಯುಗ ಸಂವಾಹನ!

೪

ಭಾವದ ಸಂದೃಷ್ಟಿಯಿರಿಸಿ
ಜೀವನದನುಭವದಿ ಗುಣಿಸಿ
ಕೇವಣಿಸಿದ ಪಂಚಾಂಗವ
    ಹಿಡಿದಿದೆ ಈ ಹೊಸದಿನ
    ಸತ್ಯಯುಗದ ಚಾರಣ !

೫

ನವಿಯೊಂದೇ ನಂಜನುಂಡು
ನವೆದುವು ಹಳದಿನದ ಹಿಂಡು;
ಕಹಿಯುಲ್ಲಿಯು ಸೊದೆಯು ಕಂಡು
    ತಿರೆಗೆ ಸುಖದ ಬಾಗಿಣ
    ತಂದಿದೆ ಈ ಹೊಸದಿನ !

೬

ನಿನ್ನೆಗಳನು ನೆಲಕೆ ಮೆಟ್ಟಿ
ನಾಳೆಗಳನು ತಲೆಗೆ ಕಟ್ಟಿ
ಕುಣಿದು ಹಾಡಿ ಕೈಯ ತಟ್ಟಿ
    ಒಂದಿತಿಂದು ಹೊಸದಿನ,
    ತಂದಿದೆ ಸುಖಜೀವನ !

---

# ದೀವಟಿಗ

ಮನದೊಳಿಂದಿನ ಪಯಣದೆಣಿಯರಿತು ದೀವಟಿಗ,
ಅನುಗೊಳಿಸು ಚೆನ್ನಾಗಿ ಮಿನುಗುವೊಲು ದೀವಿಗೆಯ !

ಇರುಳು ಮೊದಲೇ ಅಮಾಸೆಯುದು, ಕರಿಗತ್ತಲೆಯು
ಹರಡಿ ಹತ್ತೂ ದೆಸೆಗಳನ್ನು ಮರೆಮಾಡಿಹುದು;
ಕಿರುಬೆಳಕನಾದರೂ ಕೊಡುವುವೆನೆ ತಾರೆಗಳು
ಕರಿಯ ಮೋಡವು ಮುಸುಕಿಯಿದೆ ತನ್ನ ಸೆರಗಿನೊಳು ! ೧

ಹಾದಿಯುದ್ದಕೂ ಹಸನು ಇರುವುದೆನ್ನುವೆಯೇನು ?
ಹೋದವರ ಬಂದವರನೆಲ್ಲರನು ಕೇಳಿದೆನು;
ಹಾದಿ ಬಲು ಕಡಿದೆಂತೆ, ಹಿಗ್ಗು-ತಗ್ಗಿನದೆಂತೆ
ಬಾಧಿಸುವ ಮೃಗ-ಕೀಟದಿಂದ ತುಂಬಿಹುದೆಂತೆ ! ೨

ಇಂದೆಯೇ ಬೀಸುತಿದೆ ಬಲವಾಗಿ ಬಿರುಗಾಳಿ,
ನಂದಿದರೆ ದೀವಿಗೆಯು ನಡುವೆ....ಮಾಡುವುದೇನು ?
'ಸಂಧಿಸಲು ನಮ್ಮೊಡೆಯ ತೊಂದರೆಯ ಪಡಬಹುದು !'
ಎಂದು ಬಗೆಯುತ ನನ್ನ ಮೈ-ಮನಸು ನಡುಗುವುದು ! ೩

ಮಿಣುಕು-ಮಿಣುಕೆಂದು ಅರೆಬೆಳಕ ಬೀರಿದರೇನು ?
ದಣಪಣೆನೆ ಉರಿದುರಿದು ಕ್ಷಣದಿ ನಂದಿದರೇನು ?
ಕೊನೆಗಾಣುವುದೆ ನಮ್ಮ ಪಯಣವದು ಸುಲಭದಲಿ ?
ಅಣಿಮಾಡು ಬೆಳಕ—ಬಗೆದಿದವನೆಲ್ಲ—ನನ್ನ ಹುಲಿ ! ೪

ಹೊಸೆದು ಹುರಿಗೊಳಿಸಿ ಬಲವುಳ್ಳ ಬತ್ತಿಯ ಮಾಡಿ,
ಹಸನಾಗಿ ಬೆಳಗುವೊಲು ತಿಳಿಯೆಣ್ಣೆಯನು ಊಡಿ,
ಕಸುವಿನಾ ಗಾಳಿ-ಮಳೆಗಲು ಗಾಡವೊಲು ನೋಡಿ,
ಹೊಸ ಬಗೆಯ ದೀವಟಿಗೆಯನು ಮಾಡಿಕೊಂಡು ನಡಿ ! ೫

---